ಬಸವಪ್ಪಶಾಸ್ತ್ರಿಗ್ರಂಥಮಾಲಾ

ತೃತೀಯಪುಷ್ಪ

KANNADA

# BARTHRUHARI-SUBHASITHA

# ಕನ್ನಡ ಭರ್ತೃಹರಿ ಸುಭಾಷಿತವು

ಶ್ರೀಮನ್ಮಹಾರಾಜರವರ ಆಸ್ಥಾನ ಕವಿಗಳಾಗಿದ್ದ

**ಬಸವಪ್ಪಶಾಸ್ತ್ರಿಗಳಿಂದ**

ರಚಿಸಲ್ಪಟ್ಟದ್ದು

MYSORE:

SREE PANCHACHARYA ELECTRIC PRESS

1934



ಬೆಲೆ ೭ ಆಣೆ

ಬಸವಪ್ಪಶಾಸ್ತ್ರಿಗ್ರಂಥಮಾಲಾ

ತೃತೀಯಪುಷ್ಪ

KANNADA

# BARTHRUHARI-SUBHASITHA

# ಕನ್ನಡ ಭರ್ತೃಹರಿ ಸುಭಾಷಿತವು

ಶ್ರೀಮನ್ಮಹಾರಾಜರವರ ಆಸ್ಥಾನ ಕವಿಗಳಾಗಿದ್ದ

**ಬಸವಪ್ಪಶಾಸ್ತ್ರಿಗಳಿಂದ**

ರಚಿಸಲ್ಪಟ್ಟದ್ದು

MYSORE:

SREE PANCHACHARYA ELECTRIC PRESS

1934



**ಬೆಲೆ ೬ ಆಣೆ**

## ಮೂರನೆ ಮುದ್ರಣ.

---

ಮೈಸೂರು ಶ್ರೀಮಚ್ಚಾಮರಾಜೇಂದ್ರ ಒಡೆಯರ್ ಬಹದ್ದೂರ್ ಮಹಾಪ್ರಭುಗಳವರ ಆಸ್ಥಾನ ಕವಿಗಳಾಗಿದ್ದ ಅಭಿನವ ಕಾಳಿದಾಸ ಬಸವಪ್ಪಶಾಸ್ತ್ರಿಗಳವರಿಂದ ವಿರಚಿತವಾದ ಕನ್ನಡ ಭರ್ತೃಹರಿ ಸುಭಾಷಿತದ ನೀತಿಶತಕ, ಶೃಂಗಾರಶತಕ, ವೈರಾಗ್ಯಶತಕ ಈ ಮೂರು ಶತಕಗಳು ಒಂದಾಗಿ ಪ್ರಿಂಟಾಗಿದ್ದು, ಎರಡನೆಯ ಮುದ್ರಣದ ಪ್ರತಿಗಳೆಲ್ಲವೂ ಮುಗಿದುಹೋದುವು. ಈಚೆಗೆ 1934 ರಿಂದ 35ನೇ ಇಸವಿಗೆ ಘನವನ್ನು ಹೊಂದಿದ ಮದ್ರಾಸ್ ಯೂನಿವರ್ಸಿಟಿಯವರು ಈ ಸುಭಾಷಿತದ ಮೊದಲನೆಯದಾದ ನೀತಿಶತಕವನ್ನು ಇಂಟರ್‌ಮೀಡಿಯಟ್ ಕಾಲೇಜಿನ ವಿದ್ಯಾರ್ಥಿಗಳಿಗೆ ಪಠ್ಯಪುಸ್ತಕವನ್ನಾಗಿ ಇಟ್ಟಿರುವರೆಂದು ಮದರಾಸ್ ಯೂನಿವರ್ಸಿಟಿ ಕನ್ನಡಬೋರ್ಡ್ ಆಫ್ ಸ್ಟಡೀಸೀನ ಚೇರ್ಮೆನ್‌ರವರಾದ ಮ|| ರಾ|| ಬಿ. ರಾಮರಾವ್ ಎಂ.ಎ., ಎಲ್.ಎಲ್.ಬಿ. ಯವರು ನನಗೆ ತಿಳಿಸಿದ್ದರಿಂದ ನಾನು ಅವರಿಗೆ ಅತ್ಯಂತ ಕೃತಜ್ಞತೆಯಿಂದ ನನ್ನ ವಂದನೆಗಳನ್ನು ಸಮರ್ಪಿಸಿ 3ನೇ ಮುದ್ರಣವನ್ನು ಪೂರ್ತಿಗೊಳಿಸಿರುತ್ತೇನೆ. ಇದರಲ್ಲಿ ಏನಾದರೂ ಪ್ರಮಾದವಿದ್ದಲ್ಲಿ ಗುಣಜ್ಞರಾದ ವಿದ್ವಾಂಸರು ಶ್ರುತಪಡಿಸಿದಲ್ಲಿ ಕೇವಲಕೃತಜ್ಞತೆಯಿಂದ ಮುಂದಿನ ಮುದ್ರಣದಲ್ಲಿ ಸರಿಪಡಿಸುತ್ತೇನೆ.

ಮೈಸೂರು
ತಾ|| 24—4—1934

ಗ್ರಂಥಕರ್ತರಪುತ್ರ
**ಬಿ. ಮಹಾದೇವಶಾಸ್ತ್ರಿ.**

Son of Basavappa Shastri



ಮೈಸೂರು ಶ್ರೀಮನ್ ಮಹಾರಾಜರವರ ಆಸ್ಥಾನಕವಿಗಳಾದ

**ಅಭಿನವಕಾಳಿದಾಸ ಬಸವಪ್ಪಶಾಸ್ತ್ರಿಗಳು**

ಜನನ 1843 ಮರಣ 1891

ಶ್ರೀ ಜಗದ್ಗುರು ರೇಣುಕಾಚಾರ್ಯಃ ಪ್ರಸೀದತು.



**ಜೀಯಾಚ್ಛ್ರೀರೇಣುಕಾಚಾರ್ಯಃ ಶಿವಾಚಾರ್ಯಶಿಖಾಮಣಿಃ |**
**ಯೋ ವೀರಶೈವಸಿದ್ಧಾಂತಂ ಸ್ಥಾಪಯಾಮಾಸ ಭೂತಲೇ ||೧||**

# ಕನ್ನಡ ಭರ್ತೃಹರಿ ಸುಭಾಷಿತವು.

## ಪೀಠಿಕೆ.

ವೃ|| ಶ್ರೀಮದಿಳಾಧರೇಂದ್ರತನಯಾವದನಾಂಬುಜಚಂಚರೀಕನು |
ದ್ದಾಮಗುಣಾಭಿರಾಮನಜವಿಷ್ಣುಮುಖಾಮರಸನ್ನುತಮೌಳಿಮಾ ||
ಲಾಮಕರಂದಸಿಕ್ತಪದತಾಮರಸಂ ನತಕಲ್ಪಭೂರುಹಂ |
ಶ್ರೀಮದೆ ಚಾಮಭೂಮಿಪತಿಯಂ ಪರಿಪಾಲಿಕೆ ಸೋಮಶೇಖರಂ ||೧||

ಕಂ|| ನುತಗುಣಚಾಮಮಹೀಪತಿ |
ಮತಿಸಚಿವನೃಸಿಹ್ಮವರ್ಯನುತ್ಸಾಹಿಸೆ ಸಂ ||
ಸ್ಕೃತಭರ್ತೃಹರಿಸುಭಾಷಿತ |
ಕೃತಿಯಂ ಬಸವಪ್ಪಶಾಸ್ತ್ರಿ ಕನ್ನಡಿಸಿದಪಂ ||೨||

ಕಂ|| ಮುನ್ನಿನ ಸಂಸ್ಕೃತಕೃತಿಗಿದು |
ಕನ್ನಡಿಯೆನೆ ಕನ್ನಡಿಪ್ಪುದುಚಿತಂ ಕವಿಗಳ್ ||
ಎನ್ನರಿವುಳ್ಳನಿತರಿದಾಂ |
ಕನ್ನಡಿಸಿಪ್ಪೆಂ ಗುಣಜ್ಞರಭಿಮತಿಪುದಿದಂ ||೩||

# ನೀತಿಶತಕ.

ಕಂ|| ಸ್ಥಾನಾದಿಪರಿಚ್ಛೇದವ |
ನಾನದ ಸಚ್ಚಿತ್ಸುಖಾತ್ಮಮಾಗೆಸೆಯುವ ನೈ ||
ಜಾನುಭವದಿಂದಮೇ ತಿಳಿ |
ವಾ ನಿರ್ಮಲಮಾದ ತೇಜಕಭಿನಮಿಸಿದಪೆಂ ||೧||

## ಮೂರ್ಖಪದ್ಧತಿ.

ಕಂ|| ತಿಳಿವರ್ಗೆ ಮತ್ಸರಂ ಪಿರಿ |
ದಿಳೆಯಾಣ್ಮರಖರ್ವಗರ್ವದೂಷಿತಹೃದಯರ್ ||
ತಿಳಿವಿಲ್ಲದರಿನ್ನುಳಿದರ್ |
ಮುಳುಗಿತ್ತದರಿಂ ಸುಭಾಷಿತಂ ತಾನೊಡಲೊಳ್ ||೨||

---

೧. ಟಿಪ್ಪಣಿ— ಸ್ಥಾನಾದಿಪರಿಚ್ಛೇದವಂ—ದೇಶ ಕಾಲ ವಸ್ತುಗಳಿಂದ ಪರಿಮಿತಿಯನ್ನು, ಆನದ—ಹೊಂದದ. ಅಂದರೆ ಎಲ್ಲಾ ದೇಶಕಾಲ ವಸ್ತುಗಳಲ್ಲಿಯೂ ಪೂರ್ಣವಾದದ್ದೆಂದಭಿಪ್ರಾಯವು, ಸಚ್ಚಿತ್ಸುಖಾತ್ಮಮಾಗಿ—ಸತ್ಯಜ್ಞಾನಾನಂದರೂಪವಾಗಿ, ಎಸೆಯುವ—ಪ್ರಕಾಶಿಸುವ. ನೈಜಾನುಭವದಿಂದಮೇ—ತನ್ನ ಅನುಭವದಿಂದಲೇ, ತಿಳಿವ—ತಿಳಿಯಲ್ಪಡುವ, ಆ ನಿರ್ಮಲವಾದ ತೇಜಕೆ—ಪ್ರಸನ್ನವಾದ ಆ ಪರಂಜ್ಯೋತಿಗೆ, ಅಭಿನಮಿಸಿದಪೆಂ—ನಮಸ್ಕರಿಸುತ್ತೇನೆ.

೨. ತಿಳಿವರ್ಗೆ—ವಿದ್ವಾಂಸರಿಗೆ, ಪಿರಿದು—ಹೆಚ್ಚಾಗಿರುವದು, ಇಳೆಯಾಣ್ಮರ್—ಭೂಪಾಲಕರು, ಅಖರ್ವಗರ್ವದೂಷಿತಹೃದಯರ್—ಅಧಿಕವಾದ ಅಹಂಕಾರ

ಕಂ|| ತಿಳಿಯಿಸಲಕ್ಕುಂ ಸುಖದಿಂ |
ತಿಳಿಯದನಂ ತಿಳಿದಜನವನತಿಸುಖದಿಂದಂ ||
ತಿಳಿಯಿಸಲಕ್ಕುಂ ತಿಳಿದುಂ |
ತಿಳಿಯದ ಮೂರ್ಖಂಗೆ ತಿಳಿಸೆ ವಿಧಿಯುಮಶಕ್ತಂ ||೩||

ವೃ|| ಬಲುಹಿಂದಂ ಕೀಳಲಕ್ಕುಂ ಮಕರದಣಲನೊಂದಿರ್ಪ ಮಾಣಿಕ್ಯಮಂ ಸಂ| ಚಲದೂರ್ಮಿವ್ರಾತದಿಂ ಭೋರ್ಗರೆವ ಜಲಧಿಯುಂ ಯತ್ನದಿಂ ದಾಂಟಲಕ್ಕುಂ || ಸಲೆ ಕೋಪಂದಾಳ್ದ ಪಾವಂ ಪಿಡಿದು ಶಿರದೆ ಪೂಮಾಲೆವೋಲ್ತಾಳಲಕ್ಕುಂ | ಚಲದಿಂ ಬೀಗಿರ್ಪ ಮೂರ್ಖಾವಳಿಯ ತಿಳಿಯಿಸಲ್ಕಾವನುಂ ಶಕ್ತನಲ್ಲಂ ||೪||

ಕಂ|| ಹಿಳಿಯಲ್ಕಕ್ಕುಂ ತೈಲವ |
ಮಳಲೊಳಗುಂ ಮೊಲದ ಕೋಡ ಕಾಣಲುಮಕ್ಕುಂ ||
ಪೊಳೆವ ಬಿಸಿಲ್ಗೊರೆಯೊಳ್ನೀ |
ರ್ಗೊಳಲಕ್ಕುಂ ಮೂರ್ಖಜನವನೊಲಿಪುದಶಕ್ಯಂ ||೫||

---

ದಿಂದ ದುಷ್ಟವಾದ ಮನಸ್ಸುಳ್ಳವರು, ತಿಳಿವಿಲ್ಲದರ್—ಜ್ಞಾನಶೂನ್ಯರು, ಇನ್ನುಳಿದರ್—ಮಿಕ್ಕವರು, ಒಡಲೊಳ್—ಅಂತರಂಗದಲ್ಲಿ.

೩. ಅಕ್ಕುಂ—ಆಗುವದು, ತಿಳಿದುಂತಿಳಿಯದ—ಅಲ್ಪಜ್ಞನಾದ, ತಿಳಿಸೆ—ಒಡಂಬಡಿಸುವದಕ್ಕೆ.

೪. ಅಣಲಂ—ದವಡೆಯನ್ನು, ಭೋರ್ಗರೆವ—ಭೋರೆಂದು ಕೂಗುತ್ತಿರುವ, ಕೋಪಂದಾಳ್ದ—ಕೋಪವನ್ನು ತಾಳಿದ, ಪೂಮಾಲೆವೋಲ್—ಪುಷ್ಪಮಾಲೆಯ ಹಾಗೆ, ಬೀಗಿರ್ಪ—ಉಬ್ಬಿರುವ ತಿಳಿಯಿಸಲ್ಕೆ—ಒಡಂಬಡಿಸುವದಕ್ಕೆ, ತಾಳಲಕ್ಕುಂ—ಧರಿಸಬಹುದು, ಆವನುಂ ಶಕ್ತನಲ್ಲಂ—ಯಾವನೂ ಸಮರ್ಥನಲ್ಲ.

೫. ಹಿಳಿಯಲ್ಬಕ್ಕುಂ—ಹಿಂಡಬಹುದು, ಬಿಸಿಲ್ಗೊರೆಯೊಳ್—ಮರೀಚಿಕೆಯಲ್ಲಿಯು.

ವೃ|| ಸವಿನುಡಿಯಿಂದೆ ಮೂರ್ಖರ ನೊಡಂಬಡಿಸಲ್ಬಗೆದಪ್ಪ
ಮಾನವಂ | ನವಬಿಸಸೂತ್ರದಿಂದೆ ನೆರೆ ಬಂಧಿಸಲುಜ್ಜುಗಿಸಂ ಮದೇ
ಭಮಂ || ಪವಿಮಣಿಯಂ ಶಿರೀಷಕುಸುಮಾಂಚಲದಿಂ ಕೊರೆಯಲ್ಕೊ
ಡರ್ಚುವಂ | ಲವಣಸಮುದ್ರಕಿಂಪ ಮಧುಬಿಂದುವಿನಾಗಿಸಲುಂ ಪ್ರಯ
ತ್ನಿಪಂ ||೬||

ಕಂ|| ಮರೆಗೊಳುವಂತಜ್ಞತೆ ಮೇ |
ಣರಿದರ ಬಳಿಯಲ್ಲಿ ತೊಡವೆನಿಪ್ಪಂತೆ ಹಿತಂ ||
ನೆರೆ ಸಮನಿಪಂತೆಯುಂ ವಿಧಿ |
ಯರಿಯುದರೊಳ್ ಮೌನವಂ ನಿಮಿರ್ಚಿದನಲ್ತೇ ||೭||

ವೃ|| ಇನಿಸಂ ತಾಂ ತಿಳಿದಂದು ಗರ್ವಭರಮಂ ತಾಳ್ದೆಲ್ಲಮಂ
ಬಲ್ಲೆನೆಂ| ದೆನುತಂ ಬಿರ್ರನೆ ಬೀಗುತಿರ್ದೆನಕಟಾ ಮತ್ತದ್ವಿಪಂಬೊಲ್
ವಲಂ || ಜನಿಸಲ್ಕೆನ್ನೊಳೆ ಮೆಲ್ಲಮೆಲ್ಲನರಿವಾ ವಿದ್ವತ್ಸಹಾವಾಸದಿಂ ||
ಮನಕಂಟಿರ್ದ ಮಹಾಮದಂ ಜ್ವರದವೋಲ್ಪೋಯಿತ್ತಾಗಳೇನೆಂದಪೆಂ ||

---

೬. ಸವಿನುಡಿಯಿಂದೆ—ಮಧುರವಚನದಿಂದ, ಬಗೆದಪ್ಪ—ಮನಸ್ಸನ್ನು ಮಾಡುವ, ಬಿಸಸೂತ್ರ—ತಾವರೆದಂಟಿನನೂಲು, ನೆರೆ—ಚೆನ್ನಾಗಿ, ಉಜ್ಜುಗಿಪಂ—ಯತ್ನಿಸುತ್ತಾನೆ ಪವಿ—ವಜ್ರ, ಶಿರೀಷ—ಬಾಗೇಹುವ್ವು, ಒಡರ್ಚುವಂ—ಉತ್ಸಾಹಿಸುತ್ತಾನೆ, ಇಂಪಂ—ಮಾಧುರ್ಯವನ್ನು, ಆಗಿಸಲುಂ—ಉಂಟುಮಾಡುವದಕ್ಕೂ.

೭. ಅಜ್ಞತೆ—ಮೂಢತನವು, ಮರೆಗೊಳುವಂತೆ—ಮರೆಯಾಗುವ ಹಾಗೆ ಅರಿದರ—ತಿಳಿದವರ, ತೊಡವೆನಿಪ್ಪಂತೆ—ಆಭರಣವೆನ್ನಿಸುವ ಹಾಗೆ, ನೆರೆ—ಚೆನ್ನಾಗಿ, ಸಮನಿಪಂತೆ—ಉಂಟಾಗುವ ಹಾಗೆ, ನಿಮಿರ್ಚಿದಂ—ನಿರ್ಮಿಸಿದನು.

೮. ಇನಿಸಂ-ಸ್ವಲ್ಪವನ್ನು, ಬಿರ್ರನೆ ಬೀಗುತ್ತಿದ್ದೆಂ—ಅತ್ಯಂತವಾಗಿ ಉಬ್ಬುತ್ತಿದ್ದೆನು, ಮತ್ತದ್ವಿಪಂಬೊಲ್—ಮದಹತ್ತಿದ ಆನೆಯಂತೆ, ವಲಂ—ವ್ಯಕ್ತವಾಗಿ, ಅರಿವು—ಜ್ಞಾನವು.

ವೃ|| ಕ್ರಿಮಿಯುತವಾಗಿ ಮಾಂಸಮಣವಿಲ್ಲದೆ ಜೊಲ್ಲೊಳೆ ನಾಂದು ಪೂತಿಗಂ | ಧಮನೊಳಕೊಂಡ ಕಳ್ತೆಯೆಲುವಂ ಸವಿಗೊಂಡಗಿ ಯುತ್ತೆ ಕುರ್ಕ್ಕುರಂ || ಅಮರವರಂ ಸಮೀಪದೊಳಗಿರ್ದ್ದೊಡಮೀಕ್ಷಿಸಿ ಲಜ್ಜೆಯಾನದಾ | ಕ್ರಮದೊಳಗಲ್ಪಜೀವಿಯೆಣಿಸಂ ಬಯಸಿರ್ಪ್ಪುದರಲ್ಲಿ ನೈಚ್ಯಮಂ ||೯||

ವೃ|| ಸುರಪದದತ್ತಣಿಂದೆ ಹರಮಸ್ತಕಮಂ ಹರಮಸ್ತಕಾಗ್ರದಿಂ | ಧರಣಿಧರೇಂದ್ರನಂ ಧರಣಿಭೃದ್ವರನಿಂ ಧರೆಯಂ ಧರಿತ್ರಿಯಿಂ || ಶರಧಿಯ ಮತ್ತಮಾ ಶರಧಿಯಿಂ ಫಣಿಲೋಕವನೈದಿದತ್ತು ಬಾಂ | ದೊರೆವಿನಿಪಾತ ಸಂತತಿ ವಿವೇಕ ಪರಿಚ್ಯುತಿಯಿಂದೆ ಬಾರದೇ ||೧೦||

ವೃ|| ಬಿಸಿಲಂ ಛತ್ರದೆ ವಹ್ನಿಯಂ ಸಲಿಲದಿಂ ಮತ್ತೇಭಮಂ ಕೂರದಂ | ಕುಶದಿಂದೌಷಧದಿಂದೆ ರೋಗತತಿಯಂ ಮಂತ್ರಪ್ರಯೋಗಂ ಗಳಿಂ || ಬಿಸಮಂ ದಂಡದೆ ಗೋವುಮಂ ಖರಮುಮಂ ತಾಂ ವಾರಿ ಸಲ್ಕರ್ಕ್ಕುಮೀ | ರಸೆಯೊಳ್ಮೂರ್ಖನ ಮೌರ್ಖ್ಯಮಂ ಕಳೆವ ಮರ್ದ್ದೊಂ ದಿಲ್ಲ ಶಾಸ್ತ್ರಂಗಳೊಳ್ ||೧೧||

---

೯. ಅಣಂ—ಸ್ವಲ್ಪವಾದರೂ, ನಾಂದು—ನೆನೆದು, ಪೂತಿಗಂಧಮಂ—ದುರ್ಗಂಧವನ್ನು, ಒಳಕೊಂಡ—ಹೊಂದಿದ ಕಳ್ತೆಯೆಲುವಂ—ಕತ್ತೆಯ ಮೂಳೆಯನ್ನು, ಸವಿಗೊಂಡು—ರುಚಿಹತ್ತಿ, ಕುರ್ಕ್ಕುರಂ—ನಾಯಿಯು ಅಮರವರಂ—ಇಂದ್ರನು, ಆನದ—ಧರಿಸದ, ಬಯಸಿರ್ಪ್ಪುದರಲ್ಲಿ—ಮೆಚ್ಚಿದವಸ್ತುವಿನಲ್ಲಿ.

೧೦. ಸುರಪದದತ್ತಣಿಂದೆ—ಸ್ವರ್ಗದದೆಸೆಯಿಂದ, ಧರಣಿಧರೇಂದ್ರನಂ—ಹಿಮವಂತನನ್ನು, ಫಣಿಲೋಕವಂ—ಪಾತಾಳವನ್ನು, ವಿವೇಕಪರಿಚ್ಯುತಿ—ವಿಚಾರಶೂನ್ಯತೆ ಮತ್ತು ಸ್ಥಾನಭ್ರಷ್ಟತೆ, ವಿನಿಪಾತ—ಕೇಡು ಮತ್ತು ಬೀಳುವಿಕೆ, ಬಾಂದೊರೆ—ಆಕಾಶಗಂಗೆ,

೧೧. ಕೂರದ—ಕ್ರೂರವಾದ, ಬಿಸ—ವಿಷ, ಮರ್ದ್ದು—ಔಷಧ.

# ವಿದ್ವತ್ಪದ್ಧತಿ.

ವೃ|| ಸರಸಕಲಾಪರಿಷ್ಕೃತವಚರ್ನಯಬೋಧಕಸತ್ಕವೀಂದ್ರರಾ |
ವರಸನ ನಾಡಿನೊಳ್ಬಡತನಂ ಬಡೆದಿರ್ಪರೊ ತಾನದಾಮಹೀ ||
ವರನ ಜಡತ್ವಮಲ್ಲದವರ್ಗೇಂ ಧನಮಿಲ್ಲದೊಡಂ ಧನೇಶ್ವರರ್ |
ಕೊರತೆಯೆ ರತ್ನಗಳ್ಗೆ ಕುಪರೀಕ್ಷಕರಿಂ ಬೆಲೆಹೀನಮಾದೊಡಂ ||೧೨||

ವೃ|| ಬಳೆಗುಂ ಕೊಟ್ಟೊಡಮರ್ಥಿಗಳ್ಗೆ ಸತತಂ ಚಿತ್ತಕ್ಕೆ ಮಾಳ್ಕುಂ ನಿರ | ರ್ಗ್ಗಳ ಸಂತುಷ್ಟಿಯ ಗೋಚರಂ ಬಡೆಯದಿರ್ಕ್ಕುಂ ತಸ್ಕರರ್ಕ್ಕಳ್ಗಣಂ || ಅಳಿವಂ ಪೊರ್ದದು ಕಲ್ಪದಂತದೊಳಮೀವಿದ್ಯಾಧನಂ ತಾನಿದಂ | ತಳೆದಿರ್ಪ್ಪಾರ್ಯರೊಳಾಂಪುದಲ್ತು ಮದಮಂ ಸತ್ಕೀರ್ತಿಕಾಮರ್ ನೃಪರ್ ||೧೩||

ವೃ|| ಅವಮತಿಗೆಯ್ಯದಿರ್ ವಿಬುಧರಂ ಮುಳಿಸಾಂತೊಡೆ ತಾಮವರ್ ಮಹೀ | ಧವ ತವ ವೈಭವಂ ತೃಣನಿಭಂ ತಡೆಯಲ್ಕದು ಶಕ್ತ

---

೧೨. ಸರಸಕಲಾಪರಿಷ್ಕೃತವಚರ್—ರಸವಿಶಿಷ್ಟಗಳಾಗಿಯೂ ಶಾಸ್ತ್ರಗಳಿಂದ ಪರಿಷ್ಕರಿಸಿದವುಗಳಾಗಿಯೂ ಇರುವವಾಕ್ಕುಳ್ಳವರು, ನಯಬೋಧಕಸತ್ಕವೀಂದ್ರರ್—ನೀತಿಯನ್ನು ತಿಳಿಯಪಡಿಸುವ ಮಹಾಕವಿಗಳು, ಆವರಸನ—ಯಾವದೊರೆಯ, ನಾಡಿನೊಳ್—ದೇಶದಲ್ಲಿ, ತಾನದು—ಆ ಬಡತನದಿಂದಿರೋಣವು, ಆ ಮಹೀವರನ—ಆ ದೊರೆಯ, ಜಡತ್ವಂ—ಅಪ್ರಬುದ್ಧತೆಯು.

೧೩. ಬಳೆಗುಂ—ವರ್ಧಿಸುವದು, ಮಾಳ್ಕುಂ—ಮಾಡುವದು, ಗೋಚರಂಬಡೆಯದೆ—ಪ್ರತ್ಯಕ್ಷವಾಗದೆ, ಇರ್ಕ್ಕುಂ—ಇರುವದು, ತಸ್ಕರರ್ಕ್ಕಳ್ಗೆ—ಕಳ್ಳರಿಗೆ ಅಂಪುದಲ್ತು—ಹೊಂದುವದು ಯುಕ್ತವಲ್ಲ.

೧೪. ಅವಮತಿಗೆಯ್ಯದಿರ್—ಅವಮಾನವನ್ನು ಮಾಡಬೇಡ, ಮುಳಿಸಾಂತೊಡೆ—ಕೋಪವನ್ನು ಹೊಂದಿದರೆ, ತಡೆಯಲ್ಕೆಶಕ್ತಮಪ್ಪುದೆ—ಅಡ್ಡಿಮಾಡಬಲ್ಲದೆ? ತವೆ—ಚೆನ್ನಾಗಿ, ವಾರಿಸಲು, ತಡೆಯುವದಕ್ಕೆ, ಅಪ್ಪುದೆ—ಶಕ್ತವಾದೀತೆ?

ಮಪ್ಪುದೇಂ || ನವಮುದರೇಖೆಯಿಂದೆ ಕರಿದಪ್ಪ ವಿಶಾಲ ಕಪೋಲ ಯುಗ್ಮದಿಂ | ತವೆ ಪರಿಶೋಭಿಪಾನೆಗಳ ವಾರಿಸಲೇಂ ಬಸಸೂತ್ರಮಾಪ್ಪುರ್ದೇಂ ||೧೪||

ಕಂ|| ಮುಳಿಯೆ ವಿಧಿ ಯಾನಹಂಸಕೆ |
ನಳಿನೀವಿಹರಣವಿಲಾಸವಂ ತೊಲಗಿಸುವಂ ||
ಜಲದುಗ್ಧವಿಭೇದನ ಕೌ |
ಶಲ ಕೀರ್ತಿಯ ತೊಲಗಿಸಲ್ಕೆ ತಾಂ ನೆರೆದಪನೇ ||೧೫||

ಕಂ|| ಕ್ಷಿತಿಯೊಳಲಂಕರಿಪುದು ಸಂ |
ಸ್ಕೃತವಾಣಿಯದೊಂದೆಯುಡಿಗೆ ತೊಡಿಗೆಗಳಿಂದೇಂ ||
ಕ್ಷತಿಯಾಂಪುವು ತೊಡವೆಲ್ಲಂ |
ಸತತಂ ವಾಗ್ಭೂಷಣಮೆ ಸುಭೂಷಣಮಲ್ತೇ ||೧೬||

ವೃ|| ವಿದ್ಯೆಯೆ ರೂಪು ವಿದ್ಯೆಯೆ ನಿಗೂಢ ಸುರಕ್ಷಿತಮಾದವಿತ್ತಮುಂ|
ವಿದ್ಯೆಯೆ ಕೀರ್ತಿಭೋಗಕರಿ ವಿದ್ಯೆಯೆ ದೇಶಿಕರ್ಗೆಲ್ಲ ದೇಶಿಕಂ ||
ವಿದ್ಯೆಯೆ ಬಂಧುವಪ್ಪುದು ವಿದೇಶದೆ ವಿದ್ಯೆಯೆ ರಾಜಪೂಜ್ಯಮುಂ |
ವಿದ್ಯೆಯುದಿಲ್ಲದಿರ್ಪ ಮನುಜಂ ಬಗೆಯಲ್ಪಶುವಲ್ತೆ ಧಾತ್ರಿಯೊಳ್ ||೧೭||

---

೧೫. ಮುಳಿಯೆ—ಕೋಪಿಸಿಕೊಂಡರೆ, ವಿಧಿ—ಬ್ರಹ್ಮನು, ಯಾನ—ವಾಹನ, ತೊಲಗಿಸುವಂ—ಪರಿಹರಿಸುವನು ; ನೆರೆದಪನೆ—ಸಮರ್ಥನಾದಾನೆ ?

೧೬. ಕ್ಷಿತಿಯೊಳ್—ಭೂಮಿಯಲ್ಲಿ, ಅಲಂಕರಿಪುದು—ಅಲಂಕರಿಸತಕ್ಕದ್ದು, ಸಂಸ್ಕೃತವಾಣಿಯದೊಂದೆ—ಸಂಸ್ಕೃತಭಾಷೆಯೊಂದೆ ; ಉಡಿಗೆ ತೊಡಿಗೆಗಳು—ವಸ್ತ್ರಾಭರಣಗಳು, ತೊಡವೆಲ್ಲಂ—ಆಭರಣಗಳೆಲ್ಲಾ, ಕ್ಷತಿಯಾಂಪುವು—ಭಂಗವನ್ನು ಹೊಂದುವವು.

೧೭. ವಿದ್ಯೆಯುದು—ಪ್ರಸಿದ್ಧವಾದ ವಿದ್ಯೆಯು, ಬಗೆಯಲ್—ಆಲೋಚಿಸಿದರೆ, ಪಶುವಲ್ತೆ—ಪಶುವಲ್ಲವೆ, ಪಶುವೇ ಸರಿ ಎಂದು ಅಭಿಪ್ರಾಯ.

ವೃ|| ಜ್ಞಾತಿಯೆ ವಹ್ನಿ ನಾಣೆ ತೊಡವೆಪ್ಪನ ಚಿತ್ತರುಜಾಹರೌಷಧಂ | ಖಾತಿಯೆ ಶತ್ರು ಶಾಂತಿಗುಣವೇ ಕವಚಂ ವರವಿದ್ಯೆಯೇ ಧನಂ || ಘಾತುಕರೇ ಮಹಾಹಿಗಳುದಾರಕವಿತ್ವವೆ ರಾಜ್ಯವೈಭವಂ | ಭೂತಲದಲ್ಲಿ ನೋಡೆ ಮನುಜಂಗಿವರಿಂ ಪೆರವಿನ್ನುಮಿರ್ಕ್ಕುಮೇ ||೧೮||

ವೃ|| ದಯೆಯಂ ಸೇವಕರಲ್ಲಿ ಬಂಧುಜನದೊಳ್ ದಾಕ್ಷಿಣ್ಯಮಂ ನಾಡೆ ದು | ರ್ನಯರೊಳ್ ಕ್ರೌರ್ಯಮ ಪೂಜ್ಯರೊಳ್ ಕ್ಷಮೆಯ ಸಾಧುವ್ರಾತದೊಳ್ಪ್ರೀತಿಯಂ || ನಯಮಂ ರಾಜರೊಳಾರ್ಯರೊಳೃಜುತೆಯಂ ಶೂರತ್ವಮಂ ಶತ್ರುಸಂ | ಚಯದೊಳ್ ಸ್ತ್ರೀಜನದಲ್ಲಿ ಧೃಷ್ಟತೆಯನಾಂತಿರ್ಪಾತನೇ ಬಲ್ಲವಂ ||೧೯||

ಕಂ|| ಪರಿಹರಿಪುದಘವ ವಿಮಲೀ |
ಕರಿಪುದು ಮಾನಸವ ನುಡಿಗೆ ಸತ್ಯವ ಕುಡುಗುಂ ||
ಗುರುತೆಯನೀವುದು ಕೀರ್ತಿಯ |
ಬರಿಕುಮದೇಂ ಮಾಡದಿಳೆಗೆ ಸಜ್ಜನಸಂಗಂ ||೨೦||

ಕಂ|| ದೊರೆವಡೆದಿರ್ಪರ್ ಸುಕವೀ |
ಶ್ವರರ್ಮಹಾಸುಕೃತಶಾಲಿಗಳ್ರಸಸಿದ್ಧರ್ ||

---

೧೮. ಮನುಜಂಗೆ—ಮನುಷ್ಯನಿಗೆ, ಜ್ಞಾತಿಯೆ—ದಾಯಾದಿಯೆ, ನಾಣೆ—ನಾಚಿಕೆಯೆ, ತೊಡವು—ಆಭರಣವು, ಖಾತಿಯೆ—ಕೋಪವೆ, ಪೆರವು—ಅನ್ಯವಾದವುಗಳು.

೧೯. ನಾಡೆ—ಚೆನ್ನಾಗಿ, ದುರ್ನಯರೊಳ್—ದುಷ್ಟರಲ್ಲಿ, ಕ್ರೌರ್ಯವ—ಕ್ರೂರತ್ವವನ್ನು, ಆಂತಿರ್ಪಾತನೇ—ಧರಿಸಿಕೊಂಡಿರುವನೇ, ಬಲ್ಲವಂ—ತಿಳಿದವನು.

೨೦. ಗುರುತೆಯ—ದೊಡ್ಡತನವನ್ನು, ಕುಡುಗುಂ—ಕೊಡುವುದು, ಬರಿಕುಂ—ಬರಮಾಡುವದು, ಏಂಮಾಡದು—ಯಾವ ಕಾರ್ಯವನ್ನು ತಾನೇ ಮಾಡುವದಿಲ್ಲ? ಅಂದರೆ ಎಲ್ಲವನ್ನು ಮಾಡುತ್ತದೆ ಎಂದಭಿಪ್ರಾಯವು.

ಧರೆಯುಲ್ಲಿ ಜರಾಮೃತಿಭಯ |
ವಿರಹಿತವಾಗಿರ್ಪರ್ ಕೀರ್ತಿಮಯವಿಗ್ರಹದಿಂ ||೨೧||

## ಶೌರ್ಯಪದ್ಧತಿ.

ವೃ|| ಜರೆಯಿಂ ಜೀರ್ಣಮದಾದೊಡಂ ಪಸಿವಿನಿಂದಂ ಕ್ಷೀಣ ವಾಗಿದ್ದೊರ್ಡಂ | ಪಿರಿದುಂ ಕಷ್ಟವನಾಂತೊಡಂ ಹರಣವೊಂದುತ್ತಿ ದ್ದೊರ್ಡಂ ನಾಶಮಂ || ಕರಿಕುಂಭಸ್ಥಲಮಾಂಸಭಕ್ಷಣವನೊಂದಂ ನಾಡೆ ವಾಂಛಿಪ್ಪ ಕೇ | ಸರಿಯೇಂ ಮೆಲ್ಗುಮೆ ಜೀರ್ಣಮಾದ ತೃಣಮಂ ಮಾನೋನ್ನತಾಗ್ರೇಸರಂ ||೨೨||

ವೃ|| ಅಣುವಸೆ ಸೋರ್ದ್ದಣಂ ಮಲಿನಮಾಗಿ ನಿರಾಮಿಷಮಾದ ಗೋಸ್ಥಿಯಂ | ಪ್ರಣಯದೆ ಪೊರ್ದ್ದಿ ನಲ್ಮೆವಡೆಗುಂ ಶುನಕಂ ಪಸಿವಿಂಗ ದಿದ್ದೊರ್ಡಂ || ಗಣಿಸದೆ ಸಾರ್ದ್ದ ಜಂಬುಕವನಾನೆಯ ಕೊಲ್ವೊಡೆ ಪೋಪುದಲ್ತೆ ವಾ | ರಣರಿಪು ಕಷ್ಟದೊಳ್ನಿಖಿಲರುಂ ನಿಜಶಕ್ತ್ಯನುರೂಪ ಕಾಂಕ್ಷಿಗಳ್ ||೨೩||

---

೨೧. ದೊರೆವಡೆದು—ಪ್ರಸಿದ್ಧಿಯನ್ನು ಪಡೆದು, ಇರ್ಪರ್—ಇರುವರು, ರಸಸಿದ್ಧರ್—ಸಿದ್ಧವಾದ ಶೃಂಗಾರಾದಿ ರಸವುಳ್ಳವರು (ಪಾದರಸ ಸಿದ್ಧಿಯುಳ್ಳವರು).

೨೨. ಹರಣಂ—ಪ್ರಾಣವು, ಒಂದುತ್ತಿದ್ದೊರ್ಡಂ—ಪಡೆಯುತ್ತಿದ್ದಾಗ್ಯೂ, ಭಕ್ಷಣಮನೊಂದಂ—ಭಕ್ಷಣೆಯೊಂದನ್ನೇ, ನಾಡೆ—ಚೆನ್ನಾಗಿ, ವಾಂಛಿಪ್ಪ—ಅಪೇಕ್ಷಿಸುವ. ಏಂಮೆಲ್ಗುಮೆ—ಮೆಲ್ಲುದೇ ಏನು, ಮಾನೋನ್ನತಾಗ್ರೇಸರಂ—ಬಹುಮಾನಿಯಾದದ್ದು.

೨೩. ಅಣು—ಅಲ್ಪವಾದ, ವಸೆ—ಮೇದಸ್ಸು, ಅಣಂ—ಅಧಿಕವಾಗಿ, ನಲ್ಮೆವಡೆಗುಂ—ಪರಿತೋಷವನ್ನು ಪಡೆವುದು, ಪಸಿವು—ಹಸಿವು, ಪಿಂಗದಿದ್ದೊರ್ಡಂ—ಹಿಂಗದಿದ್ದರೂ, ಸಾರ್ದ್ದ—ಹತ್ತಿರಬಂದ.

ಕಂ|| ಬಾಲವನಾಡಿಸಿ ನೀಡುತೆ |
ಕಾಲಂ ಕೂಳೀವಗೊಡಲ ತೋರ್ಪುದು ಶುನಕಂ ||
ಆಲಿಸಿ ಚಾಟೂಕ್ತಿಗಳಂ |
ಲೀಲೆಯೊಳೀಕ್ಷಿಸುತೆ ಭೋಜಿಕುಂ ಗಜರಾಜಂ ||೨೪||

ಕಂ|| ಆರೀ ಪರಿವರ್ತನ ಸಂ |
ಸಾರದೊಳಳಿದುದಿಸದಿರ್ಪರುದಿಸಿದುದರ್ಕೇ ||
ಧಾರಿಣಿಯೊಳ್ ನಿಜವಂಶಕೆ |
ಗೌರವಮಂ ತಂದೊಡಾತನೇ ಉದಿಸಿದವಂ ||೨೫||

ಕಂ|| ಬಲ್ಲಿದನ ವರ್ತನಂ ತಾಂ |
ಸೊಲ್ಲಿಸಲೆರಡಂಗಮಲ್ತೆ ಸುಮಗುಚ್ಛದವೋಲ್ ||
ಎಲ್ಲರ ತಲೆಯೊಳ್ ಜೀರ್ಣಿಪು |
ದಲ್ಲದೊಡೆ ವನಾಂತದಲ್ಲಿಯೇ ಜೀರ್ಣಿಸುಗುಂ ||೨೬||

ಕಂ|| ಗುರುಮುಖ್ಯಗ್ರಹಪಂಚಕ |
ವಿರೆಯುಮದಂ ತೊರೆದು ಮೆರೆವ ದಿನಕರರಜನೀ ||
ಶ್ವರರನೆ ಪರ್ವದೆ ಕಬಳಿಪ |
ನುರುಸಾಹಸರುಚಿಶಿರೋऽವಶಿಷ್ಟಂ ದನುಜಂ ||೨೭||

---

೨೪. ಆಡಿಸಿ—ಅಲ್ಲಾಡಿಸುತ್ತ, ಕೂಳೀವಗೆ—ಕೂಳನ್ನು ಕೊಡುವನಿಗೆ, ಒಡಲ—ಹೊಟ್ಟೆಯನ್ನು, ಆಲಿಸಿ—ಕೇಳುತ್ತ, ಭೋಜಿಕುಂ—ಭೋಜನ ಮಾಡುವದು.

೨೫. ಪರಿವರ್ತನ—ಮರಳಿಮರಳಿ ತಿರುಗುವದು, ತಾತ್ಪರ್ಯ—ತನ್ನ ಕುಲಕ್ಕೆ ಯಾವನು ದೊಡ್ಡತನವನ್ನು ತರುವನೋ ಅವನೇ ಹುಟ್ಟಿದಾತನಲ್ಲದೆ ಮಿಕ್ಕವರು ಹುಟ್ಟಿದರೆಂಬ ಲೆಕ್ಕಕ್ಕೇ ಇಲ್ಲದವರು.

೨೬. ಬಲ್ಲಿದನ—ಧೀರಮನಸ್ಸುಳ್ಳವನ, ಸೊಲ್ಲಿಸಲ್—ಹೇಳಬೇಕಾದರೆ, ಎರಡಂಗಂ—ಎರಡು ತರವಾದದ್ದು.

ಕಂ|| ಇಳೆದಳೆದಹಿಪನ ಕಮಠಂ |
ತಳೆದುದು ಬೆನ್ನಿನೊಳದಂ ನಿರಾದರದಿಂದಂ ||
ಜಲಧಿ ವರಾಹಕ್ಕೆ ವಶಂ |
ಗೊಳಿಸಿತು ನಿಸ್ಸೀಮವಲೆ ಮಹಾತ್ಮರ ಚರಿತಂ ||೨೮||

ಕಂ|| ಸುರಪಕರಕುಲಿಶಹತಿಯಿಂ |
ಮರುಗುತ್ತಿರೆ ಜನಕನಕಟ ಮೈನಾಕಂ ಸಾ ||
ಗರದೊಡಲೊಳಡಗಿ ಬಾಳುವ |
ಪರಿಯಿಂದಮುಮುಸುವ ತೊರೆವುದೇ ವರಮಲ್ತೇ ||೨೯||

ಕಂ|| ತರಣಿಯ ಪಾದಂ ಸೋಂಕಿದೊ |
ಡುರಿಗುಮಚೇತನಮದಾದೊಡಂ ರವಿಕಾಂತಂ ||
ಉರುತೇಜೋನಿಧಿ ಪುರುಷಂ |
ಪರರೆಸಗಿದ ಪರಿಭವಕ್ಕೆ ಸೈರಿಸಿದಪನೇ ||೩೦||

---

೨೭. ತೊರೆದು—ಬಿಟ್ಟು, ಮೆರೆವ—ಅತ್ಯಂತ ತೇಜೋಮಯರಾದ, ಪರ್ವದೆ—ಪರ್ವಕಾಲದಲ್ಲಿ, ಕಬಳಿಪಂ—ನುಂಗುವನು, ಉರುಸಾಹಸರುಚಿ—ಬಹು ಸಾಹಸಿಯಾದ. ಶಿರೋವಶಿಷ್ಟಂ—ತಲೆಮಾತ್ರ ಉಳಿದಿರುವ.

೨೮. ಇಳೆದಳೆದ—ಭೂಮಿಯನ್ನು ಹೊತ್ತಿರುವ. ಅಹಿಪನ—ಆದಿಶೇಷನನ್ನು, ಅದಂ—ಆ ಕಮಠವನ್ನು, ನಿರಾದರದಿಂದಂ—ಅಸಡ್ಡೆಯಿಂದ, ವಂಶಗೊಳಿಸಿತು—ಸ್ವಾಧೀನವಮಾಡಿತು, ನಿಸ್ಸೀಮವಲೆ—ಹೆಚ್ಚಾದದ್ದಲ್ಲವೆ?

೨೯. ಮರುಗುತ್ತಿರೆ—ದುಃಖಿಸುತ್ತಿರಲು, ಜನಕಂ—ತಂದೆಯಾದ ಹಿಮವಂತನು, ಅಕಟ—ಅಯ್ಯೋ, ಸಾಗರದೊಡಲೊಳ್—ಸಮುದ್ರದ ಮಧ್ಯದಲ್ಲಿ, ಅಡಗಿ—ಅವಿತುಕೊಂಡು, ಪರಿಯಿಂದಮುಂ—ರೀತಿಗಿಂತಲೂ, ವರಮಲ್ತೇ—ಒಳ್ಳೇದಲ್ಲವೇ ?

೩೦. ಸೋಂಕಿದೊಡೆ—ಮುಟ್ಟಿದರೆ, ಉರಿಗುಂ—ಜ್ವಲಿಸುವದು (ಕೋಪಿಸಿಕೊಳ್ಳುವದು) ಪರರೆಸಗಿದ—ಅನ್ಯರು ಮಾಡಿದ. ಸೈರಿಸಿದಪನೆ—ಸೈರಿಸುತ್ತಾನೆಯೆ ?

ಕಂ|| ಸಿಂಗದ ಮರಿಯುಂ ಮತ್ತಮ |
ತಂಗಜಕುಂಭಗಳೊಳೆರಗುವುದು ತಾಂ ಸಹಜಂ ||
ತುಂಗಬಲಶಾಲಿಯಾದ ನ |
ರಂಗೆ ವಯಂ ವಿಕ್ರಮಕ್ಕೆ ಕಾರಣಮಲ್ಲಂ ||೩೧||

## ಅರ್ಥಪದ್ಧತಿ.

ವೃ|| ಪಣಮೆಮಗೊಂದೆ ಮುಖ್ಯಮುಳಿದ ಜಾತಿ ರಸಾತಲದತ್ತ ಪೋಕೆ ಸ | ದ್ಗುಣಮದರಿಂದ ಮಿನ್ನಡಿಗೆ ಬೀಳ್ಗೆ ಕುಲಂ ಶಿಖಿಯಿಂದೆ ಬೇಗೆ ಮೇಣ್ || ಮುಣುಗುಗೆ ಶೀಲಮಬ್ಧಿಗರಿಶೌರ್ಯಕೆ ತಾಗುಗೆ ಬಲ್ ಸಿಡಿಲ್ ಜರ | ತ್ತೃಣಕೆಣೆಯಪ್ಪುದಲ್ತೆ ಪಣಮಿಲ್ಲದೊಡೀಗುಣಮೆಲ್ಲ ಮುರ್ವಿಯೊಳ್ ||೩೨||

ಕಂ|| ಪಣಮುಳ್ಳವನೆ ಕುಲೀನಂ |
ಗುಣಿ ರೂಪಾಢ್ಯಂ ಸಮಸ್ತ ವಿದ್ಯಾನಿಪುಣಂ ||
ಎಣಿಸಲ್ವಾಗ್ಮಿಯುಮಾತನೆ |
ಗುಣಮೆಲ್ಲಂ ಜಗದಿ ಪಣವನಾಶ್ರಯಿಸಿರ್ಕುಂ ||೩೩||

---

೩೧. ಸಿಂಗದ—ಸಿಹ್ಮದ, ಮತ್ತಮತಂಗಜ—ಮದಿಸಿದ ಆನೆ, ಎರಗುವದು—ಮೇಲೆಬೀಳುವದು, ಸಹಜಂ—ಸ್ವಾಭಾವಿಕವಾದದ್ದು, ವಯಂ—ವಯಸ್ಸು, ಕಾರಣಮಲ್ಲಂ—ನಿಮಿತ್ತವಲ್ಲವು, ತುಂಗಬಲಶಾಲಿಯಾದ—ಅಧಿಕಬಲದಿಂದ ಒಪ್ಪುವ.

೩೨. ಪಣಂ—ಹಣವು, ಎಮಗೆ—ನಮಗೆ, ಒಂದೆ—ಅದೊಂದೆ, ನಮಗೆ ಹಣವೊಂದೆ ಬೇಕೆಂದರ್ಥವು, ಉಳಿದ—ಮಿಕ್ಕ, ರಸಾತಲದತ್ತ—ರಸಾತಲದ ಕಡೆಗೆ, ಇನ್ನಡಿಗೆ—ಇನ್ನೂ ಕೆಳಕ್ಕೆ, ಬೀಳ್ಗೆ—ಬೀಳಲಿ, ಬೇಗೆ—ಬೇಯಲಿ, ಮೇಣ್—ಮತ್ತು, ಪೋಕೆ—ಹೋಗಲಿ, ಅರಿಶೌರ್ಯಕೆ—ಹಗೆಯಾದ ಶೂರತನಕ್ಕೆ, ತಾಗುಗೆ—ತಗಲಲಿ, ಅಬ್ಧಿಗೆ—ಸಮುದ್ರದಲ್ಲಿ.

೩೩. ಪಣಮುಳ್ಳವನೆ—ಹಣವಿರತಕ್ಕ ಮನುಷ್ಯನೇ, ಗುಣಮೆಲ್ಲಂ—ಎಲ್ಲಾ ಗುಣಗಳು, ಎಣಿಸಲ್—ಯೋಚಿಸಿದರೆ, ಆಶ್ರಯಿಸಿರ್ಕುಂ—ಆಶ್ರಯಮಾಡಿಕೊಂಡಿರುವವು.

ವೃ|| ಯತಿ ಜನಸಂಗದಿಂ ನೃಪತಿ ದುರ್ನಯದಿಂದತಿಲಾಲನಂ ಗಳಿಂ | ಸುತನನಪೇಕ್ಷೆಯಿಂ ಕೃಷಿಯುಧರ್ಮದಿನೇಳ್ಗೆ ಧನಂ ಪ್ರಮಾದದಿಂ || ಕುತನಯನಿಂ ಕುಲಂ ಮದಿರದಿಂ ಮತಿ ಶೀಲಮನಾರ್ಯ ಸೇವೆಯಿಂ | ಶ್ರುತಿರಹಿತತ್ವದಿಂ ದ್ವಿಜನನಾದರದಿಂ ಕೆಳೆ ನಾಶ ಮೈದುಗುಂ ||೩೪||

ಕಂ|| ಗತಿಗಳ್ಮೂರೇ ವಿತ್ತಕೆ |
ವಿತರಣಮುಂ ಭೋಗಮುಂ ವಿನಾಶಮುಮೆಂದೀ ||
ಕ್ಷಿತಿಯಲ್ಲಿ ಕುಡದ ಭೋಗಿಸ |
ದತಿಲೋಭಿಯ ಧನಕೆ ಮೂರನೆಯ ಗತಿಯಕ್ಕುಂ ||೩೫||

ವೃ|| ಮದವಳಿದಾನೆ ನುಣ್ಮಳಲಳುರ್ದ್ದ ಶರನ್ನದಿ ನಾಡೆ ಸಾಣೆಯಿ | ಕ್ಕಿದ ಮಣಿ ಕೈದುಗಾಯವಡೆದಿರ್ಪ್ಪ ಭಟಂ ನಿಜನಾಥ ಸೇವೆಯಿಂ || ಮೃದಿತೆಯೆನಿಪ್ಪ ಬಾಲೆ ಕಲೆಯೊಂದುಳಿದಿಂದು ಸುಪಾತ್ರ ದತ್ತ ಸಂ| ಪದನಹ ದಾನಿಯುಂ ಬಡತನಂ ಬಡೆದುಂ ಪರಿಶೋಭಿಪರ್ ಕರಂ ||೩೬||

---

೩೪. ಅನಪೇಕ್ಷೆಯಿಂ—ನೋಡದೆಯಿರುವದರಿಂದ, ಏಳ್ಗೆ—ಅಭಿವೃದ್ಧಿ, ಕೆಳೆ—ಮಿತ್ರತ್ವವು, ನಾಶಮೈದುಗುಂ.—ನಾಶವನ್ನು ಪಡೆಯುವದು.

೩೫. ಕುಡದ-ದಾನಮಾಡದ, ಅಕ್ಕುಂ-ಆಗುವದು.

೩೬. ನುಣ್ಮಳಲಳುರ್ದ್ದ—ನುಣ್ಣಗಿರುವ ಮರಳುಕವಿದ, ಸಾಣೆಯಿಕ್ಕಿದ—ಸಾಣೆಹಿಡಿದ, ಕೈದುಗಾಯವಡೆದಿರ್ಪಭಟಂ—ಆಯುಧದಿಂದ ಗಾಯವನ್ನು ಪಡೆದಿರುವ ವೀರನು, ಮೃದಿತೆಯೆನಿಪ್ಪ ಬಾಲೆ—ಬಳಲಿರುವ ಸ್ತ್ರೀಯು, ಕಲೆಯೊಂದುಳಿದಿಂದು—ಒಂದೇಕಲೆ ಉಳಿದಿರುವ ಚಂದ್ರನು, ಸುಪಾತ್ರದತ್ತಸಂಪದಂ—ಸತ್ಪಾತ್ರದಲ್ಲಿ ಕೊಡಲ್ಪಟ್ಟ ಐಶ್ವರ್ಯವುಳ್ಳವನು, ಬಡತನಂಬಡೆದುಂ—ಕೃಶತ್ವವನ್ನು ಮತ್ತು ದರಿದ್ರತ್ವವನ್ನು ಪಡೆದಿದ್ದಾಗ್ಯೂ, ಕರಂ—ಅತಿಶಯವಾಗಿ, ಪರಿಶೋಭಿಪರ್—ಒಪ್ಪುವರು.

ಕಂ|| ಸಿರಿಪಿಂಗಿದಂದು ಧನಿಕಂ |
ಪಿರಿದೆಂದಪನೊಂದು ಸೇರೆದವಸಮುಮನವಂ ||
ಸಿರಿಕೂಡಿದಂದು ಮದದಿಂ |
ಧರಣಿಯನೆಲ್ಲವ ತೃಣಕ್ಕೆ ಸರಿಯೆಂದೆಣಿಪಂ ||೩೭||

ಕಂ|| ಅರಸನೆ ಕೇಳ್ ಕ್ಷಿತಿ ಧೇನುವ |
ಕರೆವೊಡೆ ನೀಂ ಕರುವ ಪೊರೆವತೆರದಿಂ ಪ್ರಜೆಯಂ ||
ಪೊರೆ ಪುಷ್ಟಮಾಗಿರಲ್ಪ್ರಜೆ |
ಕರೆದಪುದಿಳೆ ಕಾಮಧೇನುವೋಲ್ ಕಾಮಿತಮಂ ||೩೮||

ವೃ|| ಪುಸಿಯುಹುದೊಮ್ಮೆ ಸತ್ಯತರಮಾದಪುದೊಮ್ಮೆ ಕಠೋರ ವೊಮ್ಮೆ ಭಾ | ವಿಸೆ ಮೃದುವಾದಿಯೊಮ್ಮೆ ಬಲುಹಿಂಸಕವೊಮ್ಮೆ ದಯಾರ್ದ್ರವೊಮ್ಮೆ ಮೇಣ್ || ಅಸುವಿಗುಮರ್ಥಕುಂ ಪೆಣದುಕೊಂಡಿ ಹುದೊಮ್ಮೆ ಮಹಾವದಾನ್ಯ ಮಾ | ಗೆಸೆದಪುದೊಮ್ಮೆ ಲೋಕದೊಳನೇಕ ವಿಧಂ ನೃಪನೀತಿ ವೇಸಿವೋಲ್ ||೩೯||

ಕಂ|| ಎಣಿಸಲ್ಕಾಜ್ಞಾ ದ್ವಿಜರ |
ಕ್ಷಣವಿತರಣ ಭೋಗಕೀರ್ತಿಮಿತ್ರಾವನ ಷ ||

---

೩೭. ಸಿರಿಪಿಂಗಿದಂದು—ಐಶ್ವರ್ಯಹೋದಮೇಲೆ, ಪಿರಿದೆಂದಪಂ—ದೊಡ್ಡದೆಂದು ಎಣಿಸುತ್ತಾನೆ; ಒಂದು ಸೇರೆದವಸ—ಒಂದು ಹೋಳು ಧಾನ್ಯ; ಸಿರಿಕೂಡಿದಂದು—ಐಶ್ವರ್ಯಬಂದಾಗ.

೩೮. ಕರೆವೊಡೆ—ಹಾಲುಕರೆಯುವಕ್ಕೆ ಇಚ್ಛಿಸುವನಾದರೆ; ಪುಷ್ಟವಾಗಿರಲ್—ಪೋಷಿಸಲ್ಪಟ್ಟರೆ; ಕರುವ ಪೊರೆವತೆರದಿಂ—ಕರುವನ್ನು ಕಾಪಾಡುವಂತೆ; ಪೊರೆ—ರಕ್ಷಿಸು; ಪ್ರಜಾರಕ್ಷಣಪರನಾದ ಅರಸಗೆ ಸಂಪತ್ಸಮೃದ್ಧಿಯು ಉಂಟಾಗುವದೆಂದಭಿಪ್ರಾಯವು.

೩೯. ಪೆಣೆದುಕೊಂಡಿಹುದು—ಒಂದರೊಡನೆ ಒಂದು ತಗಲಿಕೊಂಡಿಹುದು.

ಡ್ಗುಣಗಳನುಳಿದಿರ್ಪ್ಪ ಧಾ |
ರಿಣಿಯೊಡೆಯರಪಾಶ್ರಯದೊಳದೇಂ ಫಲವಿಳೆಯೊಳ್ ||

ವೃ || ಬರೆದನೆನಿತ್ತ ಮಾನವನ ಫಾಲದೊಳಾಸರಸೀರುಹೋದ್ಭವಂ | ದೊರೆವುದನಿತ್ತೆಯೂಷರದೊಳಂ ಪಿರಿದೈದದು ಮೇರುವಲ್ಲಿಯುಂ || ಎರೆಯದಿರಾಢ್ಯರಂ ಬರಿದೆ ದೈನ್ಯದೆ ಧೈರ್ಯವ ತಾಳು ಕೂಪದೊಳ್ | ಕರಗಮೆನಿತ್ತು ನೀರನೊಳಕೊಂಬುದನಿತ್ತನೆ ವಾರ್ಧಿಯಲ್ಲಿಯುಂ ||೪೧||

## ದುರ್ಜನ ಪದ್ಧತಿ.

ಕಂ|| ಪರಧನ ವನಿತಾ ಸ್ಪೃಹೆ ನಿ |
ಷ್ಕರುಣತ್ವಂ ನಿರ್ನಿಮಿತ್ತಕಲಹಂ ಮೇಣ್ ಸ ||
ತ್ಪುರುಷ ಸ್ವಬಂಧುಜನರೊಳ್ |
ಪಿರಿದಸಹಿಷ್ಣುತೆ ಖಲರ್ಗ್ಗೆ ತಾಮಿವು ನೈಜಂ ||೪೨||

---

೪೦. ಧಾರಿಣಿಯೊಡೆಯರ—ಭೂಮಿಪಾಲಕರ ; ಅದೇಫಲಂ—ಫಲವೇನು ; ಅಜ್ಞಾನಶಕ್ತಿ ಮೊದಲಾದ ಷಡ್ಗುಣಗಳು ರಾಜನಿಗೆ ಅವಶ್ಯವಾಗಿ ಇರಬೇಕೆಂದಭಿಪ್ರಾಯವು.

೪೧. ಎನಿತ್ತಂ—ಎಷ್ಟು ಧನವನ್ನು ; ಅನಿತ್ತೆ—ಅಷ್ಟುಧನವೆ ; ಊಷರದೊಳಂ—ಊಷರ ಭೂಮಿಯಲ್ಲಿಯೂ ; ದೊರೆವುದು—ಸಿಕ್ಕುತ್ತದೆ ; ಎರೆಯದಿರ್—ಯಾಚಿಸಬೇಡ, ಕರಗ—ಬಿಂದಿಗೆಯು, ಎನಿತ್ತುನೀರಂ—ಎಷ್ಟುನೀರನ್ನು, ಒಳಕೊಂಬುದು—ಗ್ರಹಿಸುವದೊ, ಅನಿತ್ತನೆ—ಅಷ್ಟನ್ನೇ.

೪೨. ನಿಷ್ಕರುಣತ್ವ—ದಯಾಶೂನ್ಯತ್ವವು, ನಿರ್ನಿಮಿತ್ತಕಲಹಂ—ನಿಷ್ಕಾರಣವಾದ ಜಗಳ, ಸತ್ಪುರುಷ ಸ್ವಬಂಧುಜನರೊಳ್—ಸತ್ಪುರುಷರಲ್ಲಿಯೂ ತಮ್ಮ ಬಂಧು ಜನರಲ್ಲಿಯೂ, ಪಿರಿದ ಸಹಿಷ್ಣುತೆ—ಹೆಚ್ಚಿದ ಅಸಹನವು, ಖಲರ್ಗ್ಗೆ—ದುಷ್ಟರಿಗೆ, ನೈಜಂ—ಸ್ವಾಭಾವಿಕಗಳು.

ಕಂ|| ಖಲನೆನಿತಾನುಂ ವಿದ್ಯೆಯ |
ಕಲಿತಿರ್ದೊಡಮವನನುಳಿಯುವೇಳ್ಕುಂ ಬಲ್ಲರ್ ||
ತಲೆಯೊಳ್ಮಣಿಯಿಹುದೆನುತುಂ |
ಮಲಗಿಪರೇಂ ಮಗ್ಗುಲಲ್ಲಿ ಕಾಳೋರಗನಂ ||೪೩||

ವೃ|| ವ್ರತಿಯೊಳ್ ದಂಭವ ಜಾಡ್ಯವಂ ವಿನಯಿಯೊಳ್ ತೇಜಸ್ವಿಯೊಳ್ಗರ್ವಮಂ | ಮತಿಹೀನತ್ವವ ಮೌನಿಯಾದನೊಳೆ ವಾಚಾಲತ್ವಮಂ ವಾಗ್ಮಿಯೊಳ್ || ಹಿತವಂ ಪೇಳ್ವವನಲ್ಲಿ ದೈನ್ಯವ ಕೃಪಾಹೀನತ್ವಮಂ ಶೂರನೊಳ್ | ಕಿತವರ್ ಕಲ್ಪಿಪರಿನ್ನದಾವ ಗುಣಮಂ ಶ್ಲಾಘಿಪ್ಪರೋ ಕಾಣೆ ನಾಂ ||೪೪||

ವೃ|| ಪಿರಿದಹ ಲೋಭದಿಂ ಪೆರತು ದುರ್ಗುಣಮುಂಟೆ ದುರಾತ್ಮಕತ್ವದಿಂ | ಪೆರತಘಮುಂಟೆ ಗೌರವದಿನಾಭರಣಂ ಪೆರತುಂಟೆ ವಿದ್ಯೆಯಿಂ || ಸಿರಿ ಪೆರತುಂಟೆ ಸತ್ಯದೆ ತಪಂ ಪೆರತುಂಟೆ ವಿಶುದ್ಧಭಾವದಿಂ | ಪೆರತಹ ತೀರ್ಥಮುಂಟೆ ಮರಣಂ ಪೆರತುಂಟೆಯಕೀರ್ತಿಯತ್ತಣಿಂ ||

ವೃ|| ದಿನದೊಳ್ ಕಾಂತಿವಿಹೀನನಾದ ಹರಿಣಾಂಕಂ ಜವ್ವನಂ ಪೋದ ಕಾ | ಮಿನಿ ಪಂಕೇರುಹಪಂಕ್ತಿಪಿಂಗಿದ ಕೊಳಂ ವಿದ್ಯಾವಿಹೀ

---

೪೩. ಎನಿತಾನುಂವಿದ್ಯೆಯ—ಎಷ್ಟು ವಿದ್ಯೆಗಳನ್ನಾಗಲಿ ಉಳಿಯುವೇಳ್ಕುಂ—ಪರಿಹರಿಸಬೇಕು, ಬಲ್ಲರ್—ತಿಳಿದವರು, ಮಲಗಿಪರೆ—ಮಲಗಿಸಿಕೊಳ್ಳುವರೆ.

೪೪. ವ್ರತಿಯೊಳ್—ವ್ರತಾಚರಣೆಯುಳ್ಳವನಲ್ಲಿ, ದಂಭವ—ದಾಂಭಿಕತ್ವವನ್ನು, ಜಾಡ್ಯ—ಮೂಢತನ, ಕಿತವರ್—ದುಷ್ಟರು, ಇನ್ನದಾವಗುಣವಂ—ಇನ್ನಾವ ಗುಣವನ್ನು, ಕಾಣೆನಾಂ—ನಾನುಕಾಣೆನು.

೪೫. ಪಿರಿದಹ—ದೊಡ್ಡದಾದ, ಲೋಭದಿಂ—ಲೋಭಗುಣಕ್ಕಿಂತಲೂ ಪೆರತು—ಮತ್ತೊಂದು, ದುರ್ಗುಣಮುಂಟೆ—ದುರ್ಗುಣವಿರುವದೆ, ಪೆರತಘಂ, ಮತ್ತೊಂದು ಪಾಪವು, ಗೌರವದಿಂ—ದೊಡ್ಡತನಕ್ಕಿಂತಲೂ, ಅಕೀರ್ತಿಯತ್ತಣಿಂ—ಅಪಕೀರ್ತಿಗಿಂತಲೂ.

ನಾನನಂ ‖ ಧನಕಾಂಕ್ಷೈಕಪರಂ ನೃಪಂ ಧನವಿಹೀನಂ ಸಜ್ಜನಂ ರಾಜರಾ | ಮನೆಯಂ ಪೊರ್ದಿದ ದುರ್ಜನಂ ಬಗೆಯಲೇಳುಂ ಕಂಟಕಂಗಳ್ ವಲಂ ‖೪೬‖

ಕಂ‖ ಅತಿಕೋಪಿಯಾದ ಪೃಥ್ವೀ |
ಪತಿಗಿವನೆಂಮಾತನೆಂಬ ನೇಹಮದಿಲ್ಲಂ ‖
ಹುತವಹನಂಟಿದೊಡಿವನಾ |
ಹುತಿಯಿಾವವನೆಂದು ಸುಡದೆ ಪೇಳ್ದೀಕ್ಷಿತನಂ ‖೪೭‖

ವೃ‖ ಬಳಿಯಿರೆ ದಿಟ್ಟನೆಂಬರತಿದೂರದೊಳಿರ್ದೊಡೆ ಮುಗ್ಧನೆಂದಪರ್ | ಗಳಹುವನೆಂಬರುಕ್ತಿಪಟುವಂ ಸಲೆ ಸೈರಿಸೆ ಭೀರುವೆಂದಪರ್ ‖ ಖಳನಿವನೆಂದಪರ್ ಸಹಿಸದಿರ್ದೊಡೆ ಸೇವಕರಂ ಮಹೀವರರ್ | ತಿಳಿವೊಡೆ ಯೋಗಿಗಳ್ಗಮರಿದಪ್ಪುದು ಸೇವೆಯುದೆಂಬುದುರ್ವಿಯೊಳ್ ‖೪೮‖

ವೃ‖ ದುರಿತಾತ್ಮಕರ್ಕಳೆನಿಪ್ಪ ಮಾನವರ್ಗಳಂ ರಾಷ್ಟ್ರಾಧಿಕಾರಂಗಳಿಂ | ಪಿರಿದುತ್ಸಾಹಿಸಿ ಮೀರೆ ಮಿಾರಿ ನಡೆಯುತ್ತುಂ ತನ್ನ ದುಷ್ಕರ್ಮಮಂ ‖ ಸ್ಮರಣಂಗೆಯ್ಯದೆ ಸದ್ಗುಣಕ್ಕೆ ಪಗೆಯಾಗಿಪ್ಪರ್ಗಂಗಣಂ

---

೪೬. ಜವ್ವನಂಪೋದ—ಯವ್ವನಹೋದಂಥಾ, ಪಂಕೇರುಹಪಂಜ್ತಿಸಿಂಗಿದ—ಕಮಲಗಳಿಲ್ಲದ, ಬಗೆಯಲ್—ಆಲೋಚಿಸಿ ನೋಡಿದರೆ. ಧನಕಾಂಕ್ಷೈಕಪರಂ—ಹಣದಾಶೆಯೊಂದೇವುಳ್ಳ.

೪೭. ನೇಹಂ—ಸ್ನೇಹವು, ಅಂಟಿದೊಡೆ—ಸೋಕಿದರೆ, ಸುಡದೆಪೇಳ್—ಸುಡದೆ ಬಿಟ್ಟೀತೆ ಹೇಳು, ಅಂದರೆ ಅತಿ ಕೋಪಿಸ್ಠನಾದ ಅರಸನ ಆಶ್ರಯವು ಅತ್ಯಂತ ಕಷ್ಟವಾದದ್ದು.

೪೮. ಬಳಿಯಿರೆ—ಸಮಿಾಪದಲ್ಲಿದ್ದರೆ, ಗಳಹುವಂ—ಹರಟುವವನು, ಅರಿದಪ್ಪುದು—ಅಶಕ್ಯವಾಗುವದು, ದಿಟ್ಟಂ—ಭೀತಿಯಿಲ್ಲದವನು.

೪೯. ಪಿರಿದುತ್ಸಾಹಿಸಿ—ಹೆಚ್ಚಾಗಿ ಸಂತೋಷಪಡಿಸಿ.

ವೈಭವಂ | ದೊರೆಯುಲ್ ದೈವದಿನಾತನಾಳ್ವಿಳೆಯೊಳಾವಂ ಸೌಖ್ಯದಿಂ
ಬಾಳ್ದಪಂ ||೪೯||

ವೃ|| ಖಳರ ಸಖತ್ವಮೆಂಬುದು ಮೊದಲ್ ಪಿರಿದಾಗಿ ಬಳಿಕ್ಕೆ
ಮುಂಬಗಲ್ | ನೆಳಲಿನ ಮಾಳ್ಕೆಯಿಂದೆ ಕಿರಿದಪ್ಪುದು ಭಾವಿಸೆ ಸಜ್ಜನ
ರ್ಕ್ಕಳಾ || ಕೆಳೆತನಮಾದಿಯಲ್ಲಿ ಕಿರಿದಾದೊಡಮೇಂ ಕ್ರಮದಿಂ ಮಹತ್ವ
ಮಂ | ತಳೆವುದು ಪಿಂಬಗಲ್ನೆಳಲಿನಂತೆವೊಲಾವಗಮಿಾ ಧರಿತ್ರಿಯೊಳ್
||೫೦||

ಕಂ|| ತೃಣಮಂ ಮೆಲ್ವೇಣಕೆ ನೀ |
ರುಣಿಯಾಗಿಹ ಮಿಾಂಗೆ ಬಾಧೆಗೆಯ್ಯದೆ ಪರರಂ ||
ತಣಿವ ಸುಜನರ್ಗ್ಗೆ ನಿಷ್ಕಾ |
ರಣ ವೈರಿಗಳಲೆ ಕಿರಾತಧೀವರಪಿಶುನರ್ ||೫೧||

## ಸಜ್ಜನಪದ್ಧತಿ.

ವೃ|| ಗುರುವೊಳ್ನಮ್ರತೆ ವಿದ್ಯೆಯಲ್ಲಿ ಕುತುಕಂ ಸತ್ಸಂಗದೊ
ಳ್ವಾಂಛೆ ಶಂ | ಕರನೊಳ್ಭಕ್ತಿ ಜನಾಪವಾದದೆ ಭಯಂ ಸ್ವಸ್ತ್ರೀಯೊಳಾ
ಸಕ್ತಿಮೇ || ಣರಿಯೊಳ್ಸಾಹಸಮೊಲ್ಮೆ ಯನ್ಯಗುಣದೊಳ್ದುಸ್ಸಂಗದೊಳ್
ವರ್ಜನಂ | ತರಿಸಂದಿರ್ಪ್ಪವಿವಾರೊಳಾ ಸುಜನರಂ ಸಂಪ್ರೀತಿಯಿಂ
ವಂದಿಪೆಂ ||೫೨||

---

೫೦. ಮುಂಬಗಲ್—ಹಗಲಿನ ಪೂರ್ವಭಾಗ, ಪಿಂಬಗಲ್—ಹಗಲಿನ ಕಡೆಯ
ಭಾಗ.

೫೧. ಮೆಲ್ವೇಣಕೆ—ಮೆಲ್ಲುವ ಜಿಂಕೆಗೆ, ನೀರುಣಿಯಾಗಿಹ—ನೀರೇ ಆಹಾ
ರವಾಗಿರುವ, ತಣಿವ—ತೃಪ್ತಿಪಡುವ.

೫೨. ಕುತುಕಂ—ಕುತೂಹಲವು, ಒಲ್ಮೆ—ಪ್ರೀತಿಯು, ವರ್ಜನಂ—ಪ
ತ್ಯಾಗವು, ತರಿಸಂದು—ನಿಶ್ಚಯವಾಗಿ.

ಕಂ|| ಸಿರಿಯೊಳ್ಸೈರಣೆ ಕಷ್ಟದೊ |
ಳುರುಧೈರ್ಯಂ ಜಸದೊಳಾಸೆ ಶಾಸ್ತ್ರದೊಳೊಲುವುಂ ||
ಧುರದೊಳ್ ಶೌರ್ಯಂ ಸಭೆಯೊಳ್ |
ಪಿರಿದಹ ವಾಕ್ಪಟುತೆ ಸಜ್ಜನರ್ಗ್ಗಿವು ಸೈಜಂ ||೨೩||

ವೃ|| ಗುರುಪದವಂದನಂ ಶಿರಕೆ ಹಸ್ತಕೆ ದಾನಗುಣಂ ಮುಖಕ್ಕೆ ಸು | ಸ್ಥಿರಮಹ ಸತ್ಯವಾಣಿ ಹೃದಯಕ್ಕೆ ವಿಶುದ್ಧತೆ ಬಾಹುಗಳ್ಗೆ ಬಂ || ಧುರತರಶೌರ್ಯಮಾಗಮವಚಶ್ಶ್ರವಣಂ ಕಿವಿಗಳ್ಗೆ ನಿರ್ಮ್ಮಲಾ | ಭರಣಮೆನಿಪ್ಪುದುತ್ತಮರೆನಿಪ್ಪವರ್ಗ್ಗೈಸಿರಿಯಿಲ್ಲದಿರ್ದ್ದೊಡಂ ||೨೪||

ವೃ|| ಪರಧನಕಾಶೆಗೆಯ್ಯದಿನಿಸುಂ ಪರಹಿಂಸೆಯ ಮಾಡದನ್ಯ ಸುಂ | ದರಿಯರ ಸುದ್ದಿಯಾಡದೆ ದುರಾಶೆಯ ತಾಳದೆ ತನ್ನೊಳಿರ್ದ್ದು ದಂ || ಎರೆದವರ್ಗಿಲ್ಲಮೆನ್ನದನೃತೋಕ್ತಿಯನಾಡದೆ ಪೂಜ್ಯರಂ ನಿರಾಕರಿಸದೆ ಸರ್ವಭೂತದೆ ದಯಾಪರನಪ್ಪುದೆ ಸಾಧುವರ್ತನಂ ||೨೫||

ಕಂ|| ಸಿರಿಯೊಳ್ಸತ್ಪುರುಷರ ಮನ |
ವರಲ್ದುತ್ಪಲಕುಸುಮದಂತೆ ಕೋಮಲವೆನಿಕುಂ ||
ಪಿರಿದಾದ ಕಷ್ಟದೊಳ್ಬನ |
ಗಿರಿಯ ಶಿಲಾಕೂಟದಂತೆ ಕರ್ಕಶವೆನಿಕುಂ ||೨೬||

---

೨೩. ಒಲುವು—ಆಸಕ್ತಿಯು, ಧುರದೊಳ್—ಯುದ್ಧದಲ್ಲಿ, ಸಾಜಂ—ಸ್ವಭಾವಸಿದ್ಧಗಳಾದವುಗಳು.

೨೪. ಸತ್ಯವಾಣಿ—ಯಥಾರ್ಥವಾದ ಮಾತು, ಐಸಿರಿ—ಐಶ್ವರ್ಯವು, ನಿರ್ಮಲಾಭರಣಂ ಎಂಬ ಪದವನ್ನು ಸರ್ವತ್ರ ಅನ್ವಯಿಸಿಕೊಳ್ಳತಕ್ಕದ್ದು.

೨೫. ಇನಿಸುಂ—ಸ್ವಲ್ಪವಾದರೂ, ತನ್ನೊಳಿರ್ದ್ದುದಂ—ತಾನು ಕೊಡುವದಕ್ಕೆ ಕೈಲಾದದ್ದನ್ನು, ಸರ್ವಭೂತದೆ—ಎಲ್ಲಾ ಪ್ರಾಣಿಗಳಲ್ಲಿಯೂ, ಎರೆದವರ್ಗೆ—ಬೇಡಿದವರಿಗೆ.

೨೬. ಅರಲ್ದುತ್ಪಲ—ಅರಳಿದ ನೈದಿಲೆ.

ವೃ|| ಹರಣಮೆ ಪೋದೊಡಂ ದುರಿತಕೃತ್ಯವ ಗೈಯ್ಯದೆ ನೀತಿನಿಷ್ಠೆಗೋ | ಸರಿಸದೆ ಬೇಡದಲ್ಪಧನರೆಂದೆನಿಪಾಪ್ತರುಮಂ ದುರಾತ್ಮರಂ|| ಎರೆಯದೆ ಕಷ್ಟದಲ್ಲಿ ಧೃತಿಗುಂದದೆ ಸತ್ಪುರುಷಾನುಕೂಲಮಾ | ಗಿರುವ ಸುದುಷ್ಕರವ್ರತವನಾರ್ಸ್ಸಜನರ್ಗ್ಗುಪದೇಶವಿತ್ತರೋ ||೫೭||

ವೃ|| ಸದನಕ್ಕೈತಂದರಂ ಸಂತಸವಡಿಪ ಪೆರರ್ಕ್ಕಾಣದಂತೀವ ತಾಂ ಮಾ | ಡಿದ ಸತ್ಕಾರಂಗಳಂ ಪೇಳದ ಪರರುಪಕಾರಂಗಳಂ ಸರ್ವರೊಳ್ಸಂ || ಮುದದಿಂದಂ ಪೇಳ್ವ ಸಂಪತ್ತಿನೊಳತಿನಯಮಾಂತಿರ್ಪ್ಪ ಮೇಣನ್ಯರಂ ದೂ | ರದುದಂಚತ್ಖಡ್ಗಧಾರಾವ್ರತಮನಿದನದಾರ್ಸ್ಸಜ್ಜನರ್ಗ್ಗೊಲ್ದು ಪೇಳ್ದರ್ ||೫೮||

ವೃ|| ಜಲಧಿತಟಸ್ಥಶುಕ್ತಿಯೊಳುರುಳ್ದು ಜಲಂ ಪೊಸಮುತ್ತಿನಿಪ್ಪುದಾ | ಜಲಮೆ ಸರೋಜಪತ್ರದೊಳುರುಳ್ದೊಡೆ ಮೌಕ್ತಿಕದಂತೆ ತೋರ್ಕ್ಕುಮಾ || ಸಲಿಲಮೆ ಕಾದಕರ್ಬ್ಬುನದ ಮೇಲುರುಳಲ್ ಪೆಸರುಂ ಮಸುಳ್ಗುಮಾ | ಯಿಳೆಯೊಳಗಿಂತುಟಾಗಿಸುವದುತ್ತಮಮಧ್ಯಮನೀಚರಾಶ್ರಯಂ ||೫೯||

ಕಂ|| ಪಿತನ ನಿಜಗುಣದೆ ತೋಷಿಪ |
ಸುತನೆ ಸುತಂ ಪತಿಗೆ ಹಿತವ ಬಯಸುವ ಸತಿಯೇ ||
ಸತಿ ಸುಖದುಃಖದೊಳೆ ಸಮ |
ಸ್ಥಿತಿ ಸಖನೇ ಸಖನಿವರ್ ಸುಕೃತದಿಂ ದೊರೆವರ್ ||೬೦||

---

೫೭. ಹರಣಮೆ—ಪ್ರಾಣವೆ, ಓಸರಿಸದೆ—ಹಿಂದಕ್ಕೆ ಸರಿಯದೆ, ಎರೆಯದೆ—ಬೇಡದೆ.

೫೮. ಐತಂದರಂ—ಬಂದವರನ್ನು, ಪೆರರ್—ಮತ್ತೊಬ್ಬರು, ಈವ—ಕೊಡುವ, ಒಲ್ದು—ಪ್ರೀತಿಸಿ.

೫೯. ಉರುಳ್ದು—ಬಿದ್ದು, ಮಸುಳ್ಗುಂ—ಹೋಗುವದು, ಇಂತುಟು—ಹೀಗೆ.

೬೦. ಸಮಸ್ಥಿತಿಸಖ—ಒಂದೇ ರೀತಿಯಾಗಿರುವ ಮಿತ್ರ.

ವೃ|| ಮಣಿದಪರಾರ್ಜಿಸಲ್ಕಿಳಿಯೊಳುನ್ನತಿಯುಂ ನಲವಿಂದಮನ್ಯ
ರಾ | ಗುಣವ ಪೊಗಳ್ವರಾತ್ಮಗುಣಮಂ ಪ್ರಕಟೀಕರಿಸಲ್ಪರಾರ್ಥಮಂ ||
ಪ್ರಣಯದೆ ಮಾಡುವರ್ಗ್ಗಳಿಪುದರ್ಕ್ಕೆ ನಿಜಾರ್ಥವ ಶಾಂತಿಯಿಂದೆ ದೂ|
ಷಣಪರದುಸ್ಟರಂ ಮರುಗಿಪರ್ಗ್ಗಡ ಚಿತ್ರಚರಿತ್ರರುತ್ತಮರ್ ||೬೧||

## ಪರೋಪಕಾರಪದ್ಧತಿ.

ಕಂ|| ತರುಗಳ್ಬಾಗುಗುಮುರುಫಲ |
ಭರದಿಂದೆ ಮುಗಿಲ್ನವಾಂಬುಭಾರದೆ ಜೋಲ್ಗುಂ ||
ಸಿರಿಯೊಳ್ನಯಯುತರಾರ್ಯರ್ |
ಪರಿಕಿಪೊಡೆ ಪರೋಪಕಾರಿಗಳ್ಗಿದು ಸಾಜಂ ||೬೨|

ಕಂ|| ಕರಮೆಸೆಗುಂ ದಾನದೆ ಕಿವಿ |
ಮೆರೆಗುಂ ಶ್ರುತದಿಂದೆ ಕಟಕಕುಂಡಲಗಳಿನೇಂ ||
ಕರುಣಾಳುಗಳೊಡಲೆಸೆಗುಂ |
ಪರಹಿತದಿಂ ಚಂದನಾನುಲೇಪನದಿಂದೇಂ ||೬೩||

ಕಂ|| ಎರೆಯದೊಡಂ ರವಿಶಶಿಗಳ್ |
ಸರಸಿಜಕುಮುದಂಗಳಂ ವಿಕಾಸಿಪರಂಭೋ ||
ಧರಮುಂ ಸಲಿಲಮನೀವುದು |
ಪರಹಿತಮಂ ತಾವೆ ಮಾಳ್ಪರುತ್ತಮಪುರುಷರ್ ||೬೪||

---

೬೧. ಮಣಿದಪರ್—ಬಾಗುವರು, ನಲವಿಂದಂ—ಸಂತೋಷದಿಂದ, ಗಳಿಪುದರ್ಕ್ಕೆ—ಸಂಪಾದಿಸಿಕೊಳ್ಳುವದಕ್ಕೆ, ಮರುಗಿಪರ್—ದುಃಖಪಡಿಸುವರು.

೬೨. ಬಾಗುಗುಂ—ಬಗ್ಗುವವು, ಮುಗಿಲ್—ಮೋಡವು, ಜೋಲ್ಗುಂ—ಕೆಳಕ್ಕಿಳಿವುದು, ಪರಿಕಿಪೊಡೆ—ಆಲೋಚಿಸಿದರೆ, ಸಾಜಂ—ಸ್ವಭಾವಸಿದ್ಧವಾದದ್ದು.

೬೩. ಕರಂ—ಹಸ್ತವು, ಎಸೆಗುಂ—ಶೋಭಿಸುವದು, ಶ್ರುತದಿಂದೆ—ಶಾಸ್ತ್ರಶ್ರವಣದಿಂದ, ಒಡಲ್—ಶರೀರ.

೬೪. ಎರೆಯದೊಡಂ—ಯಾಚನೆಮಾಡದಿದ್ದರೂ, ಈವುದು—ಕೊಡುವುದು.

ವೃ|| ಸ್ವಾರ್ಥವ ಬಿಟ್ಟು ಲೋಕದೆ ಪರಾರ್ಥವ ಮಾಳ್ಪವರು
ತ್ತಮರ್ ಕರಂ | ಸ್ವಾರ್ಥಕೆ ಹಾನಿಗೆಯ್ಯದೆ ಪರಾರ್ಥಕೆ ಯತ್ನಿಪರಲ್ತೆ
ಮಧ್ಯಮರ್ || ಸ್ವಾರ್ಥಕೆ ತಾಂ ಪರಾರ್ಥವ ವಿಘಾತಿಸುವರ್ನರರಾಕ್ಷಸ
ರ್ಗಡಾ | ಸ್ವಾರ್ಥಮುಮಿಲ್ಲದಕ್ಕಟ ಪರಾರ್ಥವ ಕೀಳ್ವರನೇನನೆಂದಪೆಂ ||

ವೃ|| ದುರಿತದ ಕೃತ್ಯದಿಂ ತೊಲಗಿಸಲ್ ಹಿತಕಾರ್ಯದೆ ಯೋ
ಜಿಸಲ್ ಗುಣೋ | ತ್ಕರವ ವಿಕಾಸಿಸಲ್ ಮರೆಸತಕ್ಕುದ ತಾಂ ಮರೆಯಿ
ಸಲ್ ವಿಪತ್ತಿನೊಳ್ || ಪೊರೆಯಲುಮೀಯಲುಂ ಸಮಯದೊಳ್ನೆ
ರೆದಿರ್ದಪನಾವನಾ ಮಹಾ | ಪುರುಷನೆ ಮಿತ್ರನೆಂದುಸಿರ್ದಪರ್ ನಯ
ಶಾಸ್ತ್ರವಬಲ್ಲ ಸಜ್ಜನರ್ ||೬೬||

ವೃ|| ಒಡನೊಂದಿರ್ದೊಲವಿಂಗೆ ಪಾಲಿನಳಲಂ ನೋಡುತ್ತೆ
ನೀರಗ್ನಿಯೊಳ್ | ಕಿಡೆ ತನ್ನೀರದಳಲ್ಗಣಂ ಕುದಿಯುತಂ ಪಾಲಗ್ನಿ
ಯೊಳ್ಬೀಳಲಾಂ || ತೊಡೆ ನೀರಂ ಕುಡೆ ಕೂಡೆ ಸೈರಣೆಯ ತಾಂ
ತಾಳ್ದತ್ತು ಪಾಲಿಂತು ಸಂ | ಗಡಿಸಿರ್ಕ್ಕುಂ ಗಡ ಸಾಧುಮೈತ್ರಿ ಯೆನು
ತಂ ಪೇಳ್ವರ್ ನಯಜ್ಞರ್ ವಲಂ ||೬೭||

---

೬೫. ತಾಂ—ತಾವು, ಗಡಾ—ಅಲ್ಲವೆ, ಕೀಳ್ವರ—ಕಿತ್ತುಹಾಕುವರನ್ನು, ಏನನೆಂದಪೆಂ—ಏನೆಂದು ಹೇಳಲಿ.

೬೬. ತೊಲಗಿಸಲ್—ನಿವಾರಿಸುವದಕ್ಕೆ, ಮರೆಸತಕ್ಕುದ—ಗುಟ್ಟುಮಾಡತಕ್ಕದ್ದನ್ನು, ಮರೆಸಲ್—ಗುಟ್ಟುಮಾಡುವದಕ್ಕೆ, ಪೊರೆಯಲುಂ—ಕಾಪಾಡುವದಕ್ಕೂ, ಈಯಲುಂ—ಕೊಡುವದಕ್ಕೂ, ನೆರೆದಿರ್ದಪಂ—ಸಮರ್ಥನಾಗಿರುವನೋ, ನಯಶಾಸ್ತ್ರವ—ನೀತಿಶಾಸ್ತ್ರವನ್ನು.

೬೭. ಒಡನೊಂದಿರ್ದ—ಸಂಗಡ ಸೇರಿದ, ಒಲವಿಂಗೆ—ಪ್ರೀತಿಗಾಗಿ, ಕಿಡೆ—ಇಂಗಲು, ತನ್ನೀರದ—ಆ ನೀರಿನ, ಅಳಲ್ಗೆ—ದುಃಖಕ್ಕೆ, ಅಂತೊಡೆ—ಉದ್ಯೋಗಿಸಲು, ಕೂಡೆ—ಸಂಗಡಲೆ, ತಾಳ್ದತ್ತು—ಧರಿಸಿತು, ಸಂಗಡಿಸಿರ್ಕ್ಕುಂಗಡ—ಸೇರಿಕೊಂಡಿರುವದಲ್ಲವೆ.

ವೃ|| ಒಂದೆಡೆ ಕೇಶವಂ ಪವಡಿಸಿರ್ಪನದೊಂದೆಡೆ ರಾಕ್ಷಸೋತ್ಕರಂ | ಸಂದಣಿಸಿರ್ಪುದೊಂದೆಡೆ ಶರಣ್ಬುಗೆ ಕಾಯ್ದನಗಾಳಿ ಶೋಭಿಕುಂ || ಒಂದೆಡೆ ಬಾಡಬಾಗ್ನಿಯೆಸೆದಿರ್ಪುದದೊಂದೆಡೆ ಕಲ್ಪವಾರಿಭೃ | ದ್ಬೃಂದಮುದಿರ್ಪುದೆಂದೊಡೆ ಸಮುದ್ರನ ಮೈಮೆಯತರ್ಕ್ಯಮದ್ಭುತಂ ||

ವೃ|| ಪುಟ್ಟಿದನೋರ್ವನೇ ಕಮಠನುರ್ವಿಯ ಭಾರವನಾಂತ ಕಾರಣಂ | ಪುಟ್ಟಿದನೋರ್ವನೇ ಧ್ರುವನುಡುವ್ರಜವಂ ನಡೆಯಿಪ್ಪ ಕಾರಣಂ | ಪುಟ್ಟಿದರೇಂ ಪರೋಪಕೃತಿಗೈಯ್ಯದೆ ಸುಂಮನೆ ಪುಟ್ಟಿ ಸತ್ತವರ್ | ಪುಟ್ಟವೆ ಸಾಯವೇ ಜಗದೊಳತ್ತಿಯ ಪಂಣೊಳೆನಿತ್ತೊ ಜಂತುಗಳ್ ||೬೯||

ವೃ|| ಬಿಡು ಮದವಂ ವಿವರ್ಜಿಸು ದುರಾಶೆಯ ಶಾಂತಿಯ ಪೊರ್ದು ಸತ್ಯವಂ | ನುಡಿ ದುರಿತಕ್ಕೆ ಹೇಸು ನಡೆ ಸತ್ಪಥದೊಳ್ ಸಲೆ ಸೇವಿಸಾರ್ಯರಂ || ಪಿಡಿ ನಯವಂ ಸುಕೀರ್ತಿವಡೆ ಮನ್ನಿಸು ಮಾನ್ಯರ ದುಃಖಿಯಲ್ಲಿ ನೀ | ನಿಡು ದಯವಂ ನಯಂಗೊಳಿಸು ವೈರಿಯುಮಂ ದಲಿದಾರ್ಯವರ್ತನಂ ||೭೦||

---

೬೮. ಒಂದೆಡೆ—ಒಂದು ಸ್ಥಳದಲ್ಲಿ, ಸಂದಣಿಸಿರ್ಪುದು—ಗುಂಪಾಗಿರುವದು, ಶರಣ್ಬುಗೆ—ಮರೆಹೋಗಲಿಕ್ಕಾಗಿ, ಕಾಯ್ದ—ರಕ್ಷಿಸಲ್ಪಟ್ಟ, ಮೈಮೆ—ಮಹಿಮೆಯು, ಅತರ್ಕ್ಯಂ—ಊಹಿಸಲಾಗದು.

೬೯. ಪುಟ್ಟಿದಂ—ಹುಟ್ಟಿದಂಥ, ಪುಟ್ಟಿದರೇಂ—ಅಂದರೆ, ಮನುಷ್ಯನಾಗಿ ಹುಟ್ಟಿದಮೇಲೆ ಪರೋಪಕಾರವನ್ನು ಮಾಡದೆ ಸುಮ್ಮನೆಯಿದ್ದು ಸತ್ತವರೆಲ್ಲಾ ಹುಟ್ಟಿದವರೇ ಅಲ್ಲವೆಂಬ ಅಭಿಪ್ರಾಯ, ಎನಿತ್ತೊ ಜಂತುಗಳ್—ಎಷ್ಟೋ ಹುಳುಗಳು.

೭೦. ಪೊರ್ದು—ಹೊಂದು, ಹೇಸು—ಅಸಹ್ಯಪಡು, ಸುಕೀರ್ತಿವಡೆ—ಒಳ್ಳೇ ಯಶಸ್ಸನ್ನು ಪಡೆದುಕೊ, ನಯಂಗೊಳಿಸು—ನಯಪಡಿಸಿಕೋ, ವೈರಿಯುಮಂ—ಹಗೆಯನ್ನಾದರೂ, ಇದು —ಈ ನಡತೆಯು, ಆರ್ಯವರ್ತನಂ—ಸಜ್ಜನರ ವೃತ್ತಿ, ದಲ್—ನಿಶ್ಚಯವು, ಅಂದರೆ, ಇದೀಗ ಸಜ್ಜನರ ನಡತೆ ಎಂದು ಅಭಿಪ್ರಾಯ.

ಕಂ|| ಪರಗುಣ ಪರಮಾಣುವುಮಂ |
ಗಿರಿಗೈದುರ್ಬುವ ಮಹೋಪಕಾರದೆ ಜಗಮಂ ||
ಹರಿಸಂಬಡಿಪ ಕೃಪಾಮಯ |
ಕರಣತ್ರಯರೆನಿಪ ಸುಜನರಿಳೆಯೊಳ್ಕೆಲಬರ್ ||೭೧||

## ಧೈರ್ಯಪದ್ಧತಿ.

ಕಂ|| ನಡುಗದೆ ವಿಷದಿಂ ಸಂತಸ |
ವಡೆಯದೆ ಜಲನಿಧಿಯ ಫಣಿಯಿನಮರ್ದುದಿಪನ್ನಂ ||
ಕಡೆದದು ವಿಬುಧಾಳಿ ಫಲಂ |
ಬಡೆವನ್ನಂ ತೊರೆಯರಾತ್ಮಕೃತ್ಯವ ಧೀರರ್ ||೭೨||

ಕಂ|| ಎಡರಡಸುವುದೆಂದಂಜುತೆ |
ತೊಡಗರ್ ಕಾರ್ಯವನೆ ನೀಚರೆಡರಡಸಲೊಡಂ ||
ಬಿಡುವರ್ಮಧ್ಯಮರೆಡರೆನಿ |
ತಡಸಿದೊಡಂ ತ್ಯಜಿಸರಾಂತಕೃತ್ಯವ ಧೀರರ್ ||೭೩||

ವೃ|| ಬುವಿಯೊಳ್ನಿದ್ರಿಪರೊರ್ಮೆಯೊರ್ಮೆ ಮಣಿಪರ್ಯಂಕಾಗ್ರದೊಳ್ನಿದ್ರಿಪರ್ | ಸವಿವರ್ ಶಾಕವನೊರ್ಮೆಯೊರ್ಮೆ ಸವಿವರ್

---

೭೧. ಪರಮಾಣುವುಮಂ—ಪರಮಾಣುವನ್ನಾದಾಗ್ಯೂ, ಗಿರಿಗೈದು—ಬೆಟ್ಟಮಾಡಿ, ಉರ್ಬುವ—ಹಿಗ್ಗುವ, ಕೆಲಬರ್—ಕೆಲವರು.

೭೨. ನಡುಗದೆ—ಭಯಪಡದೆ, ವಿಷದಿಂ—ವಿಷದಿಂದ, ಸಂತಸವಡೆಯದೆ—ಸಂತೋಷಪಡದೆ, ಅಮರ್ದುದಿಪನ್ನಂ—ಅಮೃತಹುಟ್ಟುವವರಿಗೂ, ಕಡೆದುದು—ಮಥಿಸಿತು, ತೊರೆಯರ್—ಬಿಡರು, ಧೀರರ್—ಧೈರ್ಯಶಾಲಿಗಳು, ಫಲಂಬಡೆವನ್ನಂ—ಫಲವನ್ನು ಹೊಂದುವವರಿಗೂ, ಆತ್ಮಕೃತ್ಯವ—ತಮ್ಮ ಕೆಲಸವನ್ನು.

೭೩. ಎಡರ್—ವಿಘ್ನವು, ಅಡರಿಸುವದು—ಆವರಿಸುವದು, ತೊಡಗರ್—ಯತ್ನಿಸುವುದಿಲ್ಲ, ತ್ಯಜಿಸರ್—ಬಿಡರು, ಆಂತಕೃತ್ಯವ—ಹಿಡಿದ ಕೆಲಸವನ್ನು.

ಶಾಲ್ಯಂನವಂ ಜೀರ್ಣವ ‖ ಸ್ರವನಾಚ್ಛಾದಿಪರೊರ್ಮೆಯೊರ್ಮೆಧರಿ
ಪದ್ದಿರ್ಪವೃದ್ಧಕೂಲಂಗಳಂ | ತವೆ ದುಃಖಂ ಸುಖಮೆಂಬುದಂ ಗಣಿಪ
ರೇಂ ಕಾರ್ಯಾರ್ಥಿಗಳ್ ಚಿತ್ತದೊಳ್ ‖೭೪‖

ಕಂ‖ ನಿಂದಿಕೆ ಮೇಣ್ನೆಯವಿದರಭಿ |
ನಂದಿಕೆ ಸಿರಿಯೊರ್ಮೆ ಬರ್ಕೆ ಪೋಕೆ ಯಥೇಷ್ಟಂ ‖
ಇಂದೇ ಮೃತಿಯೈದುಗೆ ಮೇಣ್ |
ಮುಂದೈದುಗೆ ನೀತಿಪಥವ ನುಳಿಯಂ ಧೀರಂ ‖೭೫‖

ಕಂ‖ ಕಡಿವಡಿಯದೆ ಕಾಮಿನಿಯರ |
ಕಡೆಗಂಣಂಬಿಂದೆ ತೀವ್ರಕೋಪಾನಲನಿಂ ‖
ಸುಡದೆ ಬಹುವಿಷಯಲೋಭ |
ಕ್ಕೆಡೆಯಾಗದೆ ಬಾಳ್ವನಲೆ ಜಗತ್ರಯವಿಜಯಂ ‖೭೬‖

ಕಂ‖ ಕೆಡುಕರ್ಕೆಡುಕುಗಳಂ ಗೈ |
ದೊಡಮೆನಿತುಂ ತೊರೆಯನಾತ್ಮಧೈರ್ಯವ ಧೀರಂ ‖

---

೭೪. ಬುವಿಯೊಳ್—ಭೂಮಿಯಲ್ಲಿ, ಒರ್ಮೆ—ಒಂದುವೇಳೆಯಲ್ಲಿ, ದುಃಖಂಸುಖಮೆಂಬುದಂ—ಅಂದರೆ, ಇದು ದುಃಖಕರವಾದದ್ದು ಇದು ಸುಖಕರವಾದದ್ದು ಎಂಬುವವನ್ನು, ಗಣಿಪರೇಂ—ಗಣನೆಮಾಡುತ್ತಾರೆಯೆ.

೭೫. ನಿಂದಿಕೆ—ನಿಂದಿಸಲಿ, ಬರ್ಕೆ—ಬರಲಿ, ಪೋಕೆ—ಹೋಗಲಿ, ಐದುಗೆ—ಹೊಂದಲಿ, ನೀತಿಪಥವ—ನ್ಯಾಯಮಾರ್ಗವನ್ನು, ಉಳಿಯಂ—ಬಿಡನು.

೭೬. ಕಡಿವಡೆಯದೆ—ಛೇದವನ್ನು ಪಡೆಯದೆ, ಕಡೆಗಣ್ಣಂಬಿಂದೆ—ಕಟಾಕ್ಷವೆಂಬಬಾಣದಿಂದ, ಸುಡದೆ—ದಹಿಸಲ್ಪಡದೆ, ಎಡೆಯಾಗದೆ—ಗುರಿಯಾಗದೆ, ಬಾಳ್ವನಲೆ—ಬಾಳುವನಲ್ಲದೆ.

೭೭. ಕೆಡುಕರ್—ಕೇಡಾಳಿಗಳು, ಎನಿತುಕೇಡುಗಳಂ—ಎಷ್ಟುಕೇಡನ್ನಾದರೂ, ಗೈದೊಡಂ—ಮಾಡಿದಾಗ್ಯೂ, ತೊರೆಯಂ—ಬಿಡನು, ಅಧೋಮುಖಂ ಗೈದೊ

ಬಿಡುವನೆ ಯಧೋಮುಖಂಗೈ |
ದೊಡಮೂರ್ಧ್ವಜ್ವಲನಮಂ ಹುತಾಶನನೆಂದುಂ ||೭೭||

ಕಂ|| ಧರಣಿಧರಶಿಖರದತ್ತಣಿಂ |
ನುರುಳ್ದಂಗಂ ಚೂರ್ಣಮಕ್ಕೆ ಬೀಳ್ಗೆಮ ಶಿಖಿಯೊಳ್ ||
ಉರಗಾಸ್ಯದೆ ಕೆಡೆಗೆ ಕರಂ |
ವರಮೆಂಬರ್ ತೊರೆಯರಾತ್ಮಶೀಲವ ಧೀರರ್ ||೭೮||

ಕಂ|| ಪರಿಕಿಸೆ ಸುಶೀಲವುಳ್ಳಗೆ |
ಹರಿ ಹರಿಣಂ ಶರಧಿ ಕುಲ್ಯಮನಲಂ ಸಲಿಲಂ ||
ಸುರಗಿರಿ ಮೊರಡಿ ವಿಷಂ ಸುಧೆ |
ಯುರಗಂ ತಾಂ ಕುಸುಮಮಾಲೆಯಪ್ಪುದು ಜಗದೊಳ್ ||೭೯||

ವೃ|| ವಿನಯಂ ವಿದ್ಯೆಗೆ ಪೆರ್ಚಿದೈಸಿರಿಗೆ ಸಾಧುತ್ವಂ ಶಮಂ ಜ್ಞಾನಕಾ | ಜನೆಗೈದರ್ಥಕೆ ಪಾತ್ರದಾನಮತಿಶೂರತ್ವಕ್ಕೆ ವಾಕ್ಸಂಯಮಂ || ಘನಮಾಗಿರ್ಪ್ಪ ತಪಕ್ಕೆ ಶಾಂತತೆ ಸಹಿಷ್ಣುತ್ವಂ ಪ್ರಭುತ್ವಕ್ಕದೇಂ | ನೆನೆ ನಿರ್ವ್ಯಾಜತೆ ಧರ್ಮಕೆಲ್ಲಜನರ್ಗಂ ಶೀಲಂ ಪರಂ ಭೂಷಣಂ ||೮೦||

ಕಂ|| ತರು ಕಡಿವಡೆದೊಡಮೊಡನಂ |
ಕುರಿಪುದು ಶಶಿ ಕೃಶತೆಯಾಂತೊಡಂ ವರ್ಧಿಸುವಂ ||
ಧರೆಯೊಳಿದು ಸಾಜಮೆನ್ನುತೆ |
ಪರಿತಾಪಂದಾಳರುತ್ತಮರ್ಕ್ಕಷ್ಟದೊಳಂ ||೮೧||

---

ದಂ—ತಲೆಕೆಳಗಾಗಿ ಇಟ್ಟರೂ, ಊರ್ಧ್ವಜ್ವಲನಮಂ—ಮೇಲುಮುಖವಾಗಿ ಉರಿಯುವದನ್ನು.

೭೮. ಚೂರ್ಣಮಕ್ಕೆ—ಚೂರಾಗಲಿ, ಮೇಣ್—ಅಥವಾ, ಕೆಡೆಗೆವು—ಬೀಳಲಿ.

೭೯. ಹರಿ—ಸಿಂಹ, ಕುಲ್ಯಂ—ಕಾಲುವೆ, ಮೊರಡಿ—ಸಣ್ಣಗುಡ್ಡ.

೮೦. ಪ್ರಭುತ್ವಕ್ಕದೇನೆನೆ—ಪ್ರಭುತ್ವಕ್ಕೆ ಏನು ಒಡವೆಯೆಂದರೆ, ಇಲ್ಲಿ ಭೂಷಣಂ ಎಂದು ಸರ್ವತ್ರ ಅನ್ವಯಿಸಿಕೊಳ್ಳಬೇಕು.

## ದೈವಪದ್ಧತಿ.

ವೃ|| ಗುರುವೇ ಮಂತ್ರಿ ನಿಜಾಯುಧಂ ಪವಿ ಬಲಂ ದೇವರ್ಕ್ಳೈರಾವತಂ | ಕರಿ ಸಗ್ಗಂ ಘನದುರ್ಗಮಾಹರಿಸಹಾಯುಂ ಮತ್ತಮಿಂತಿದ್ದೊರ್ಡಂ || ಸುರಪಂ ರಾಕ್ಷಸರಿಂದೆ ಭಂಗವಡೆದಂ ಸಂಗ್ರಾಮದೊಳ್ ಮಿಕ್ಕ ಜೀ | ವರ ಮಾತೇಂ ತೆಗೆ ಪೌರುಷಂ ವಿಫಲಮಕ್ಕುಂ ದೈವಮೇ ರಕ್ಷಕಂ ||೮೨||

ವೃ|| ಇರುಳೊಳು ಮೂಷಕಂ ಕೊರೆದು ತಾನೆ ಮಹಾಕ್ಷುಧೆಯಿಂ ಕರಂಡದೊಳ್ | ಸುರುಗಿದ ಸರ್ಪದಾನನದೆ ಬೀಳ್ದುದದಂ ಸಲೆ ತಿಂದು ತೃಪ್ತಿಯಾಂ || ತಿರದೊಡನೈದಿತಾವುರಗನಾ ಬಿಲದಿಂದಮೆ ಮರ್ತ್ಯ ಸಂತಮಿರ್ | ಪರಿಕಿಸೆ ಹಾನಿವೃದ್ಧಿಯೊಳೆ ದೈವಮೆ ಕಾರಣಮಲ್ತೆ ಧಾತ್ರಿಯೊಳ್ ||೮೩||

ಕಂ|| ಹತಕಂತುಕದಂತೇಳ್ವಂ |
ಮತಿವಂತಂ ದುಃಖಪತಿತನಾದೊಡಮಿಳೆಯೊಳ್ ||
ಮತಿಹೀನಮನುಜನಾಪ |
ತ್ಪತನಂ ಮೃತ್ಪಿಂಡಪತನದಂತೆಪೊಲಕ್ಕುಂ || ||೮೪||

---

೮೧. ಕಡಿವಡೆದೊಡಂ—ಛೇದಿಸಲ್ಪಟ್ಟಾಗ್ಯೂ ; ಪರಿತಾಪಂದಾಳರ್—ಸಂತಾಪವನ್ನು ಹೊಂದರು.

೮೨. ಸಗ್ಗಂ—ಸ್ವರ್ಗವು ; ಇಂತಿದ್ದೊರ್ಡಂ—ಹೀಗೆ ಸಹಾಯವಿದ್ದರೂ ; ಭಂಗವಡೆದಂ—ಪರಾಜಯವನ್ನು ಹೊಂದಿದನು.

೮೩. ಇರುಳೊಳು—ರಾತ್ರಿಯಲ್ಲಿ ; ಕರಂಡದೊಳ್—ಬುಟ್ಟಿಯಲ್ಲಿ ; ಸುರುಗಿದ—ಹಸಿವಿನಿಂದಬಳಲಿದ ; ಆನನದೆ—ಬಾಯಲ್ಲಿ ; ಸಂತಮಿರ್—ಸುಮ್ಮನಿರು.

೮೪. ಹತಕಂತುಕದಂತೆ—ಹೊಡೆಯಲ್ಪಟ್ಟ ಚಂಡಿನಂತೆ, ಆಪತ್ಪತನಂ—ವಿಪತ್ತಿಯಿಂದ ತಗ್ಗುವದು.

ಕಂ|| ಕಡುವಿಸಿಲ ಬೇಗೆ ಶಿರಮಂ |
ಸುಡೆ ತಾಳದ್ರುಮದ ನೆಳಲ್ಗೆ ಬರೆ ಖಲ್ವಾಟಂ ||
ಕೆಡೆದದರ ಫಲದೆ ತಚ್ಛಿರ |
ಮೊಡೆದುದು ಗಡ ದೈವಹತಕನಾವೆಡೆ ಬಾಳ್ವಂ ||೮೫||

ಕಂ|| ಇನಶಶಿಗಳ್ಗಂ ಗ್ರಹಪೀ |
ಡನಮಂ ಗಜಪಕ್ಷಿಗಳ್ಗೆ ಬಂಧವ ವಿದ್ವ ||
ಜ್ಜನರ್ಗಂ ಬಹುದಾರಿದ್ರ್ಯವ |
ನನುಗೊಳಿಸಿದ ವಿಧಿಯೆ ಬಲ್ಲಿದಂ ಮೂಜಗದೊಳ್ ||೮೬||

ಕಂ|| ಅಮೃತಾಂಗಂ ಮೋಹೌಷಧಿ |
ರಮಣಂ ಶತಭಿಷಗುಪೇತನೀಶಶಿರಸ್ಥಂ ||
ಹಿಮಕರನಾತನುಮಂ ಬಿಡದ |
ಮಮಾ ಕ್ಷಯಮಕಟ ವಿಧಿಯ ವಿಾರುವನಾವಂ ||೮೭||

ಕಂ|| ಬಿದಿ ಕುಂಬರನಂತೆ ಮನೊ |
ಮೃದವಂ ಮುದ್ದೆಯ ನೊಡಚ್ಚು ಗತದನಾಪದ್ದಂ ||
ಡದೆ ಘಟ್ಟಿಸಿ ಚಿಂತಾಚ |
ಕ್ರದೆ ಸುತ್ತಿಪನಿನ್ನದೇನಗ್ಯೆವನೊ ಕಾಣೆಂ ||೮೮||

---

೮೫. ಕಡುವಿಸಿಲ—ಕಡಿದಾದಬಿಸಲಿನ ಬೇಗೆ—ತಾಪವು, ಖಲ್ವಾಟಂ—ಬಟ್ಟತಲೆಯುವನು, ಕೆಡದ—ಬಿದ್ದ, ಆವೆಡೆ—ಯಾವಸ್ಥಳದಲ್ಲಿ.

೮೬. ಇನಶಶಿಗಳ್ಗಂ—ಸೂರ್ಯಚಂದ್ರರಿಗೂ, ಅನುಗೊಳಿಸಿದ—ಉಂಟುಮಾಡಿದ, ಬಲ್ಲಿದಂ—ಬಲವಂತನು.

೮೭. ಶತಭಿಷಗುಪೇತಂ—ಶತಭಿಷಾನಕ್ಷತ್ರದಿಂದಕೂಡಿದವನು ಮತ್ತು ನೂರುಮಂದಿ ವೈದ್ಯರಿಂದ ಕೂಡಿದವನು, ಕ್ಷಯಂ—ಕಲಾಹೀನತೆ ಮತ್ತು ಕ್ಷಯರೋಗ.

೮೮. ಮನೋಮೃದವಂ—ಮನಸ್ಸೆಂಬ ಮಣ್ಣನ್ನು, ಒಡಚ್ಚುಗತ—ಮಾಡುತ ಆಪದ್ದಂಡದೆ—ವಿಪತ್ತೆಂಬ ದಂಡದಿಂದ.

ವೃ|| ಎಲೆ ವಿಧಿ ಸಾಕದೇತಕೆ ಬಳಲ್ವೆ ದುರಾಗ್ರಹದಿಂ ವಿಪತ್ತಿ ನೊಳ್ | ಕಲಿಗಳ ಧೈರ್ಯನಾಶವನಭೀಕ್ಷಿಪೆನೆಂದು ಜಡಾತ್ಮನಲ್ತೆ ನೀಂ|| ಚಲಿಸುವುವೇಂ ಕುಲಾವನಿಧರಂಗಳಿವಾ ಪ್ರಳಯಾಂತದಲ್ಲಿಯುಂ | ಜಲಧಿಗಳುಂ ಕರಂ ಬಲಿದ ತಮ್ಮಯ ಮೇರೆಯ ಮೀರಲಾಪ್ಪುವೇ ||

ಕಂ|| ಧರೆಗೆ ತೊಡವೆನಿಪ ಸುಗುಣಾ |
ಕರಪುರುಷೋತ್ತಮನ ಪುಟ್ಟಿಪಂ ವಿಧಿಯೊಡನಾ ||
ನರನಂ ಕ್ಷಣಭಂಗುರನಂ |
ವಿರಚಿಸಿದಪನಹಹ ವಿಧಿಗುಮೇಂ ಗಾಂಪತನಂ ||೯೦||

ಕಂ|| ಜನಪರನಾಶ್ರಯಿಸಿದೊಡಂ |
ತನಗೆನಿತಂ ಧಾತೃನೇಮಿಸಿಹನನಿತಕ್ಕುಂ ||
ಅನಿಶಂ ವರ್ಷಿಸೆ ಮೇಘಂ |
ಪನಿ ಯೊಂದೆರಡಲ್ತೆ ಚಾತಕಾಸ್ಯದೆ ಬೀಳ್ಗುಂ ||೯೧||

## ಕರ್ಮಪದ್ಧತಿ.

ವೃ|| ವಿಧಿವಶರಾದ ನಿರ್ಜರರ ವಂದಿಸಲೇಂ ವಿಧಿವಂದ್ಯನೆಂಬೊಡಾ | ವಿಧಿಯುಮಣಂ ವಿಚಾರಿಪ್ಪೊಡೆ ಕರ್ಮಕೆ ತಕ್ಕ ಫಲೋಪಭೋಗಮಂ | ವಿಧಿಸುವನಾ ಫಲಂ ಜಗದೆ ಕರ್ಮದಧೀನಮೆನಿಪ್ಪುದಂತರಿಂ | ದಧಿಕಬಲಾಢ್ಯಮೆಂದೆನಿಪ ಕರ್ಮಮೆ ತಾನಭಿವಂದ್ಯಮುರ್ವಿಯೊಳ್ ||೯೨||

---

೮೯. ಕಲಿಗಳ—ಸಮರ್ಥರ, ಅಭೀಕ್ಷಿಪೆಂ—ನೋಡುವೆನು, ಇವು—ಈ ಕುಲಪರ್ವತಗಳು ಬಲಿದ—ಸ್ಥಿರವಾಗಿ ನಿಂತಿರುವ.

೯೦. ತೊಡವೆನಿಪ—ಆಭರಣಗಳೆನಿಸಿಕೊಳ್ಳುವ, ಪುರುಷೋತ್ತಮನ—ಉತ್ತಮಪುರುಷನನ್ನು. ಏಂ ಗಾಂಪತನಂ—ಏನು ಮೂಢತನ.

೯೧. ಅಕ್ಕುಂ—ಆಗುವದು, ಪನಿ—ಹನಿ, ಬೀಳ್ಗುಂ—ಬೀಳುವವು.

೯೨. ವಂದಿಸಲೇಂ—ವಂದಿಸಿದರೆ ಏನಾದೀತು, ಅಂತರಿಂದೆ—ಆದಕಾರಣದಿಂದ.

ವೃ|| ಕುಳಿತಂ ಕುಂಬರನಂತಜಂ ಭುವನಭಾಂಡಂಗೈವುತಂ
ತೇತರಿಂ | ಬಳಲ್ದಂ ವಿಷ್ಣು ದಶಾವತಾರ ಘನಕಾಂತಾರಾಂತದಲ್ಲೆ
ತರಿಂ || ತಳೆದಂ ಭಿಕ್ಷುಕಲೀಲೆಯಂ ಧೃತಕಪಾಲಂ ರುದ್ರನಂತೇತರಿಂ
ತೊಳಲ್ವಂ ಬಾನೊಳಗರ್ಕನೇತರಿನಣಂ ತತ್ಕರ್ಮಮಂ ವಂದಿಪೆಂ ||೯೩||

ವೃ|| ಖಳರ್ಗಳ ನಾರ್ಯರೆಂದೆನಿಪ ಮೂರ್ಖರ ಜಾಣರ ಮಾಳ್ಪ
ನಾಡೆ ಕಂ | ಗೊಳಿಸದ ವಸ್ತುವಂ ಕ್ಷಣದೆ ಕಾಣಿಪ ವೈರಿಯುಮಂ
ಕ್ಷಣಾರ್ಧದೊಳ್ || ಕೆಳೆಯುನಮಾಳ್ಪ ಮೇಣ್ ವಿಷಮುಮಂ ಸುಧೆಗೈವ
ಸುಕರ್ಮಮಂ ಮುದಂ | ದಳೆದಭಿವಂದಿಸಿಚ್ಛೆವಡೆ ನೀಂ ಬಿಡು ಕಷ್ಟ
ಗುಣಂಗಳಾಸ್ಥೆಯಂ ||೯೪||

ವೃ|| ಸಿತಸೌಧಂ ಸವಿಲಾಸಕಾಮಿನಿಯರುಂ ಶ್ವೇತಾತಪತ್ರೋ
ಜ್ವಲಾ | ಯತಭಾಗ್ಯಂ ದೃಢಗಾತ್ರತಾದಿಗಳುಮೆಲ್ಲಂ ಸಂಭವಿಕ್ಕುಂ
ಪುರಾ || ಕೃತ ಸತ್ಕರ್ಮದೆ ಕಾಣ ತೀರಲದು ತಾಂ ಕೇಳೀತ್ರುಟತ್ತಂತುಸಂ|
ಗತಮುಕ್ತಾಗಣದಂತೆ ಜಾರುಗುಮವೆಲ್ಲಂ ನಾಡೆ ನೋಡಲ್ ವಲಂ ||

ಕಂ|| ಪರಿಣಾಮವನವಧರಿಸುತೆ |
ವಿರಚಿಪುದುಚಿತಂ ವಿವೇಕಿ ಕಾರ್ಯಂಗಳ ತಾಂ ||
ತ್ವರೆಯಿಂ ಗೈದೊಡೆ ಫಲಿಸುವ |
ವರೆಗಂ ದಹಿಸುವುದು ಮನವ ಕಾರ್ಯವಿಪಾಕಂ ||೯೬||

---

೯೩. ಕುಂಬರನಂತೆ—ಕುಂಬಾರನಹಾಗೆ, ಅಂತು—ಹಾಗೆ, ಏತರಿಂ—ಯಾವವಿಧಿಯಿಂದ, ಬಾನೊಳಗೆ—ಆಕಾಶದಲ್ಲಿ.

೯೪. ಕಂಗೊಳಿಸಿದ—ಕಣ್ಣಿಗೆಕಾಣಿಸಿದ, ಕೆಳೆಯುನಮಾಳ್ಪ—ಸ್ನೇಹಿತನನ್ನಾಗಿ
ಮಾಡುವ, ಮುದಂದಳೆದು—ಸಂತೋಷವನ್ನು ಹೊಂದಿ, ಇಛ್ಛೆವಡೆ—ಇಷ್ಟಾರ್ಥ
ವನ್ನು ಹೊಂದು.

೯೫. ಸಿತಸೌಧಂ—ಉಪ್ಪರಿಗೆ, ಪುರಾಕೃತಸತ್ಕರ್ಮದೆ—ಪೂರ್ವಪುಣ್ಯದಿಂದ,
ಕಾಣ—ಕಾಣೆಯಾ.

೯೬. ಪರಿಣಾಮವ— ಕೊನೆಗೆ ಆಗುವದನ್ನು, ಅವಧರಿಸುತೆ—ನಿಶ್ಚೈಸಿ.

ವೃ|| ಜನಿಸಿದೊಡೇನು ಕರ್ಮಧರೆಯೊಳ್ಸಲೆ ಸತ್ಕ್ರಿಯೆಗೈಯ್ಯದಾವನಾ | ಮನುಜನೊಡಚ್ಚುರ್ವಂ ಕಡಿದು ಬಾಳೆಯ ಹಾರಕಗೈಗೆ ಬೇಲಿಯಂ|| ಕನಕದ ನೇಗಿಲಿಂದಿಳೆಯನುಳ್ತಪನೆಕ್ಕದ ತೂಲಕಾಗಿ ಚಂ| ದನತರುಕಾಷ್ಠದಿಂ ಪಚಿಸುವಂ ತಿಲಪಿಷ್ಟವ ರತ್ನಪಾತ್ರೆಯೊಳ್ ||೯೭||

ಕಂ|| ಫಲಿಸವು ವಿದ್ಯಾಕೃತಿಗಳ್ |
ಕುಲಶೀಲನೃಪಾಶ್ರಯಂಗಳುಂ ಮುಂ ತಪದಿಂ ||
ಗಳಿಯಿಸಿಕೊಂಡಿಹ ಭಾಗ್ಯಮೆ |
ಫಲಿಪುದು ಕಾಲದೆ ನರಂಗೆ ವೃಕ್ಷಂಗಳ ಪೋಲ್ ||೯೮||

ಕಂ|| ಕಡಲಂ ಮುಳುಗುಗೆ ಮೇರುವಿ |
ನೆಡೆಗೈದುಗೆ ಕಲಿಗೆ ನಿಖಿಲ ಕಲೆಗಳ ನೃಪರಂ ||
ಎಡೆವಿಡದಾಶ್ರೈಸುಗೆ ಮೇಣ್ |
ಪಡೆದನಿತಲ್ಲದೆ ನರಂಗೆ ಮಿಗಿಲ್ಕೈತಹುದೇಂ ||೯೯||

ಕಂ|| ಜಲದೊಳ್ ಶಿಖಿಯೊಳ್ ವನದೊಳ್ |
ಜಲನಿಧಿಯೊಳ್ಪರ್ವತಾಗ್ರದೊಳ್ಕೊಳುಗುಳದೊಳ್ ||
ಬಲುಮರವೆ ನಿದ್ದೆಗಳೊಳಂ |
ಸಲಹುವುದು ಮನುಷ್ಯನಂ ಪುರಾಕೃತಪುಣ್ಯಂ ||೧೦೦||

---

೯೭. ಜನಿಸಿದೊಡೇನು—ಹುಟ್ಟಿಫಲವೇನು, ಕರ್ಮಧರೆಯೊಳ್—ಕರ್ಮಭೂಮಿಯಲ್ಲಿ, ಸತ್ಕ್ರಿಯೆಗೈಯ್ಯದೆ—ಸತ್ಕಾರ್ಯವನ್ನು ಮಾಡದೆ, ಒಡಚ್ಚುರ್ವಂ—ಮಾಡುವವನು, ಹಾರಕಗೈಗೆ—ಹಾರಕದಹೊಲಕ್ಕೆ, ಉಳ್ತಪಂ—ಉಳುವನು.

೯೮. ವಿದ್ಯಾಕೃತಿಗಳ್—ವಿದ್ಯೆ ಮತ್ತು ಆಕಾರಗಳು, ಮುಂ—ಪೂರ್ವದಲ್ಲಿ, ಗಳಿಯಿಸಿಕೊಂಡಿಹ—ಸಂಪಾದಿಸಿಕೊಂಡಿರುವ, ಕಾಲದೆ—ಪರಿಪಕ್ವಕಾದಲ್ಲಿ.

೯೯. ಕಡಲಂ—ಸಮುದ್ರವನ್ನು, ಎಡೆಗೆ—ಸಮೀಪಕ್ಕೆ, ಮಿಗಿಲ್—ಹೆಚ್ಚು.

೧೦೦. ಕೊಳುಗುಳದೊಳ್-ಯುದ್ಧದಲ್ಲಿ, ಬಲುಮರವೆ-ಬಲವಾದ ಮತ್ತತೆ.

ಕಂ|| ಬನಮುಂ ಪಟ್ಟಣಮಪ್ಪುದು |
ಜನರೆಲ್ಲರ್ ಸ್ವಜನರಪ್ಪರೀ ನೆಲನೆಲ್ಲಂ ||
ಧನಕನಕವಸ್ತುಪೂರಿತ |
ಮೆನಿಪುದಣಂ ಪೂರ್ವಪುಣ್ಯವುಳ್ಳಂಗನಿಶಂ || ||೧೦೧||

---

೧೦೧. ಬನಮುಂ—ವನವು ಕೂಡಾ, ಅಣಂ—ಅತ್ಯಂತವಾಗಿ.

**ನೀತಿಶತಕಂ ಸಂಪೂರ್ಣಂ.**



# ಕನ್ನಡ ಭರ್ತೃಹರಿ ಸುಭಾಷಿತಂ.

## ಶೃಂಗಾರಶತಕಂ.

ಕಂ|| ಅಂಬುಜಭವಾದ್ಯರಂ ಹರಿ |
ಣಾಂಬಕೆಯರ ಗೃಹಕೆ ಕುಂಭದಾಸರಗೆಯ್ದಂ ||
ತೆಂಬೊಡಸದಳನೆನಿಪ್ಪಾ |
ಮೀಂಬಳವಿಗೆಯಂಗೆ ತಾನೆ ಕುಂಬಿಡವೇಳ್ಕುಂ ||೧||

ಕಂ|| ನಗೆಯಿಂ ನಾಣಿಂ ಭಾವದೆ |
ಬಿಗುಹಿಂ ಮೋಣ್ ಪಿಂದಿರುಂಗಿದರೆನೋಟಗಳಿಂ ||
ಸೊಗಸಂ ಸೂಸುವ ನುಡಿಯಿಂ |
ಜಗಳದೊಳಂ ಬಗೆಯೆ ಬಂಧನಂ ಗಡ ಪೆಣ್ಗಳ್ ||೨||

ಕಂ|| ನಿಡುವುರ್ವ್ವಂ ಮುರಿದೀಕ್ಷಿಪ |
ಕಡೆಗಣ್ ನಾಣ್ಚೆರೆದ ನಗೆ ಮನಂಗೊಳಿಸುವ ಮೆ ||
ಲ್ನುಡಿಯುಂ ಬೆಡಗಿನ ನಡೆಯುಂ |
ತೊಡವುಂ ಕೈದುವುಮೆನಿಪ್ಪುವಸಿಯರ್ಗ್ಗೆಂದುಂ ||೩||

ವೃ|| ನಿಡುವುರ್ವ್ವಂ ಮುರಿದೊರ್ಮ್ಮೆ ಭೂರಿಭಯದಿಂದಂ ನಾಡೆ ತಳ್ತೊರ್ಮ್ಮೆ ನಾ | ಣೆಡೆಗೊಂಡಾದಮದೊರ್ಮ್ಮೆ ಬಲ್ಬೆಡಗಿನಿಂದಂ ಕೂಡಿ ತಾಮೊರ್ಮ್ಮೆ ನೋ || ಳ್ಪುಡುರಾಜಾನನೆಯರ್ಕ್ಕಳಂ ಗಜಮದಾಂಚದ್ದೃಗ್ವಿಲಾಸಂಗಳಿಂ | ದಿಡಿದಿರ್ಪ್ಪೀ ದೆಸೆಯ್ಯೈದೆ ನೈದಿಲೆಸಳಿಂ ಕೋದಂತಿರುದ್ಭಾಸಿಕುಂ ||೪||

ವೃ|| ಸಸಿಯಂ ಪೋಲ್ವ ಮೊಗಂ ಸರೋಜದಲರಂ ಝುಂಕಿಪ್ಪ ಕಣ್ಪೊನ್ನನೇ | ಳಿಸುವಂಗದ್ಯುತಿ ಬಿಣ್ಪುವೆತ್ತ ಪೊರವಾರ್ ಲೋಲಂ ಬನೀಲಾಳಕಂ || ಕುಸುಮಾಸ್ತ್ರದ್ವಿಪಕುಂಭಮಂ ನಗುವ ವಕ್ಷೋಜಂ ಮನೋಹಾರಿ ವಾ | ಗ್ರಸಮಿಂತೆಲ್ಲಮೆ ಕಾಂತೆಯರ್ಗ್ಗಪಿರಿದುಂ ಸ್ವಾಭಾವಿಕಂ ಭೂಷಣಂ ||೫||

ಕಂ|| ನಸುತೋರ್ಪ್ಪ ಮುದ್ದನಗೆ ರಸ |
ಮೊಸರ್ವೊಳ್ನುಡಿಚಂಚಲಾಕ್ಷಿ ಲೀಲಾಗಮನಂ ||
ಪೊಸತೆನಿಸೆ ಜೌವನಂಬಡೆ |
ದಸಿಯಳೊಳಾವುದು ಮನೋಜ್ಞಮಲ್ಲದುದಕ್ಕುಂ ||೬||

ವೃ|| ಯುವತೀಪ್ರೇಮಪ್ರಸನ್ನಾಸ್ಯಮೆ ವರಮೆನಿಕುಂ ನೀರರಿಂ ದೀಕ್ಷಿಸಲ್ತ | ಕ್ಕುವರಲ್ಲಾಘ್ರಾಣಿಸಲ್ತಕ್ಕುವರೊಳವಳಸುಯ್ನಲ್ಮೆವಾತಾಲಿಸಲ್ತ || ಕ್ಕುವರೊಳ್ಸಂಸ್ಪರ್ಶಿಸಲ್ತಕ್ಕುವರೊಳಿಸೆವ ಮೆಯ್ ಜೌವನಂ ಜಾನಿಸಲ್ತ | ಕ್ಕುವರಲ್ಲಾಸ್ವಾದಿಸಲ್ತಕ್ಕುವರೊಳಧರಮೆಂತೆತ್ತಲುಂ ತದ್ವಿಲಾಸಂ ||೭||

ವೃ|| ಕೆಲಂದೊಲಗೆ ಹಂಸಿಗಳ್ಗಮನಸಂಚಲನ್ಮೇಖಲಾ | ಮಿಳತ್ಕನಕಕಿಂಕಿಣೀವಲಯನೂಪುರಾರಾವದಿಂ || ವಿಲೋಲಹರಿಣಾಂಗನಾನಿಭಕಟಾಕ್ಷಪಾತಂಗಳಿಂ | ವಿಲಾಸಿನಿಯರಾವನಂ ಮರುಳುಗೆಯ್ಯದಿರ್ಪ್ಪರ್ವಲಂ ||೮||

ವೃ|| ಕ್ರಮುಕಂಪಿತಹಾರಪಯೋಧರೆ ಕುಂ | ಕುಮಪಂಕಕಳೇವರೆ ಯಂಘ್ರಿರಣ || ತ್ಸಮಣೀಮಯನೂಪುರೆ ನೀರೆಯದಾ | ರುಮನಾರಯೆ ಕೈಬಸಗೆಯ್ಯಳಣಂ ||೯||

ಕಂ|| ಯುವತಿಯುರಬಲೆಯರೆಂಬಾ |
ಕವಿಗಳ್ವಿಪರೀತವಚನರಾಲೋಲಕಟಾ ||

ಕ್ಷವಿಲಾಸಪಾತದಿಂ ವಾ |
ಸವಮುಖರಂ ಗೆಲ್ದ ವಧುಗಳಬಲೆಯರೆಂತೈ ||೧೦||

ಕಂ|| ನಿಜಮಾಕಾಂತೆಗೆ ಮಕರ |
ಧ್ವಜನಾಜ್ಞಾಕರನೆನಿಪ್ಪನಂತಲ್ಲದೊಡಾ ||
ದ್ವಿಜರಾಜಮುಖಿಯ ನೇತ್ರಾಂ |
ಬುಜಸೂಚಿತಮಾತ್ರದೊಳ್ಪ್ರವರ್ತಿಸಿದಪನೇಂ ||೧೧||

ವೃ|| ಕಚಮುಂ ಸಂಯಮಿ ವಕ್ತ್ರಮುಂ ದ್ವಿಜಗಣಾಕೀರ್ಣಂ ಕುಚದ್ವಂದ್ವಮುಂ | ಶುಚಿಮುಕ್ತಾಶ್ರಯಮಾವಗಂ ನಯನಮುಂ ಶೃತ್ಯಂತಪಾರೀಣಮಿಂ || ತು ಚಕೋರಾಕ್ಷಿಕರಂ ಪ್ರಶಾಂತಮೆನಿಕುಂ ನಿನ್ನಂಗಮೇಂ ಚಿತ್ರಮಂ | ವಚಿಪೆಂ ನೋಡಲೊಡಂ ಸಮಂತೆನಗೆ ಚೇತೋರಾಗಮಂ ಪುಟ್ಟಿಕುಂ ||೧೨||

ಕಂ|| ಪೊಸತೀ ಬಿಲ್ಲಾಳ್ತನಮೆಲೆ |
ಬಿಸಜಾನನೆ ನಿನ್ನೊಳೆಂತೆನಲ್ಮಾನಸಮಂ ||
ಇಸುವೆ ಗಡಾ ಗುಣದಿಂದಮೆ |
ಇಸೆ ನಿಶಿತಶಿಲೀಮುಖಂಗಳಿಂದದರಿಂದಂ ||೧೩||

ಕಂ|| ದೀಪಮುದಿದ್ದರ್ಂ ಮೇಣ್ತಾ |
ರಾಪತಿ ತಾರಾಗಣಂಗಳಿದ್ದೊರ್ಡಮುಕಟಾ ||
ಓಪಳಿನಗಲಿಪ್ಪೆರ್ನಗೇ |
ನೇಪೊಳ್ತುಂ ಲೋಕಮಿದು ತಮೋಮಯಮೆನಿಕುಂ ||೧೪||

ವೃ|| ಬಗೆಯುಲ್ಪಕ್ಷೋಜಮುದ್ವೃತ್ತಮಿದತಿತರಳಂ ಲೋಚನಂ ಚಂಚಲಂ ಭ್ರೂ | ಯುಗಳಂ ರಾಗಾಂಕಮೋಷ್ಠಂ ಮರುಗಿಕೆ ಮನಮಂ ತಾಮಿವಂಗೋದ್ಭವಂ ಕೈ || ಮಿಗೆ ಸೌಭಾಗ್ಯಾಕ್ಷರವ್ಯೂಹಮ ಬರೆದ

ನೆನಲ್ತೋಱುವೀ ನಿನ್ನ ರೋಮಾ | ಳಿ ಗಡಾ ಮಧ್ಯಸ್ಥಮಾಗಿರ್ದೊಡ
ಮಳಲಿಪುದಿಂತೇತರಿಂ ಕಾತರಾಕ್ಷೀ ||೧೫||

ಕಂ|| ಗುರುಕುಚಭಾರದೆ ಶಶಿಭಾ |
ಸುರವದನದೆ ಭಾಸ್ವದಧರಮಣಿಯಿಂದೆ ಶನೈ ||
ಶ್ಚರಚರಣಂಗಳಿನೆಸೆವೀ |
ತರುಣಿಗೆ ಬಗೆಯಲ್ ಗ್ರಹೋಪಯುಕ್ತತೆ ಸಲ್ಗುಂ ||೧೬||

ಕಂ|| ಮೊಗವೋ ಶಶಿಕಾಂತಂ ಕರ |
ಯುಗಳಮೊ ನವಪದ್ಮರಾಗಮಾಕೆಯ ಕುರುಳೋ ||
ಳಿಗಳೊ ಮಹಾನೀಲಗಳೆನೆ |
ಮುಗುದೆಯ ರತ್ನಾಂಗಿಯೆಂಬೊಡೇಂ ಬಗೆವುಗಡೇ ||೧೭||

ವೃ|| ಅವಳ ಪಯೋಧರಂ ಘನತರಂ ಜಘನಂ ಸುಮನೋಜ್ಞಮಾನನಂ | ಕುವಲಯಬಂಧುಹೃದ್ಯಮೆನುತುಂ ಬರಿದೇತಕೆ ಪಂಬಲಿಪ್ಪೆನೀ || ನವರೊಳಗಂತುಟಾಸೆ ನಿನಗುಳ್ಳೊಡೆ ಚಿತ್ತಮೆ ಮಾಡುಪುಣ್ಯಮಂ | ಭುವನದೆ ಕೂರ್ತ ವಸ್ತು ದೊರೆಕೊಳ್ವೊಡೆ ಸೈಪನೊಡರ್ಚ್ಚದಕ್ಕುಮೋ ||೧೮||

ವೃ|| ಮಗಮಗಿಪಚ್ಚ ಜೌವನದ ಸೌಸವಕಿಕ್ಕೆ ಸುಸಿಲ್ಗಳೊರ್ಮೆದಲ್ | ಮುಗುಳ್ಗಣೆವೊತ್ತ ಬಲ್ಲಹನ ಗೆಲ್ಲದ ಬಲ್ಪೊಣೆ ಪೊಚ್ಚಲಂಪಿನು || ಜ್ಜಗಗಳ ದೇಸಿಗಂ ವಲಮೆನಲ್ಮೆರೆವೀಮಿಗಗಣ್ಣ ಪೆಣ್ಗಳಂ | ತೊಗುಮಿಗೆವೆತ್ತ ಬೇಟದೆಡೆಯಾಟಗಳೊಕ್ಕಣಿಸಲ್ಕೆ ತಕ್ಕುವೇಂ ||೧೯||

ವೃ|| ಶೃಂಗಾರೈಕರಸಾಶ್ರಯಂ ಪ್ರಣಯಹೃದ್ಯಂ ಸಮ್ಮದೋಲ್ಲಾಸಿ ಯು | ತ್ತುಂಗಪ್ರೇಮಭರೋಜ್ಜ್ವಲಂ ಲಲಿತಸಂದರ್ಭಂ ಮನೋಹಾರಿಯಾ || ಸಂಗೋತ್ಪತ್ತಿವಿಧಾಯಕಂ ವಿತತವಿಶ್ವಾಸಾರ್ದ್ರ

ವಾಗಿರ್ಪ್ಪ ತ| ನ್ವಂಗೀನವರ್ಮವಚಂಗಳೆಕ್ಕಟಿಯೊಳೇಂ ನೀಳ್ಕೊಳ್ಳುವ್ರೋ
ಚಿತ್ತಮಂ ||೨೦||

## ಸಂಭೋಗವರ್ಣನಂ.

ಕಂ|| ಅಸಿಯಳದೊರ್ವ್ವಳ್ವನತರು |
ವಿಸರದ ಬಳಿನೆಳಲೊಳಂತೆ ವಿಶ್ರಮಿಸುತ್ತಂ ||
ಮುಸುವರ್ ಸಸಿಗದಿರ್ಗಳಂ ವಾ |
ರಿಸುತಂ ಮೇಲುದಿನ ಸೆರಗಿನ್ನೈತರುತಿರ್ದ್ದಳ್ ||೨೧||

ಕಂ|| ಇನಿಯಳ ಕಾಣದ ಮೊದಲಾ |
ನನಮಂ ನೋಳ್ಪೊಲ್ಮೆ ನೋಳ್ದಬಳಿಕವಳಾಲಿಂ ||
ಗನರತಿ ಯಾಲಿಂಗಿಸೆ ಮೇ |
ಣ್ತನುಗಳೊಳೇಕತೆಯನೆಳಸಿದಪೆವಾವಾದಂ ||೨೨||

ವೃ|| ಜಾದಿಮಾಲೆ ಶಿರದಲ್ಲಿ ವಕ್ತ್ರದೊಳ್ | ಮೋದವಾದ ಮೊಡಲೊಳ್ಸುಕುಂಕುಮಾ || ಮೋದಗಂಧಮುರದೊಳ್ಮದಾಲಸ | ಸ್ತ್ರೀ ದಲಿರ್ದ್ದೊಡದೆ ಸಗ್ಗಮಲ್ತೆ ಪೇಳ್ ||೨೩||

ವೃ|| ಮೊದಲೊಳ್ಮಾಣ್ಮಾಣೆನುತ್ತಂ ಸೊವಡಿಸಿ ಬಳಿಕಂ ನಲ್ಮೆಯಿಂ ನಾಂದು ಮೇಣ್ಬಾ | ವದೊಳಾದಂ ನಾಣ್ಚಿ ಮೇಣ್ಪೆಂದೆಗೆದು ಬಳಿಕೆ ಬಲ್ಪಾರಿ ಮೇಣ್ ಸ್ನೇಹಸಾರ || ಹೃದದೊಳ್ಮಂದಾದರಂ ಕೈಮಿಗೆ ಸುಸಿಲ ವಿಲಾಸಂಗಳಂ ಬೀರಿ ಮೇಣಂ | ಗದಿನಂಗಂ ಕೂಡೆ ನೀಡುಂ ಸೊಗವಡಿಪ ಕುಲಸ್ತ್ರೀರತಂ ರಮ್ಯಮಲ್ತೇ ||೨೪||

ಕಂ|| ಅರೆಮುಚ್ಚಿದ ಕಣ್ಮಲರಿಂ |
ಪರೆದಲಕದೆ ಬೆಮರ್ದ ಕದಪಿನಿಂ ರತಿಖೇದಂ ||
ಬೆರಸುರದೆ ಮಲಂಗಿದ ಸುಂ |
ದರಿಯುರ ತುಟಿಯುಮರ್ದನೀಂಟುವಕ್ಕೃತಪುಣ್ಯರ್ ||೨೫||

ಕಂ|| ಅರೆಮುಗುಳ್ದ ನೇತ್ರದಿಂ ಸುಖ |
ಪರವಶಮಿರ್ಪ್ಪಂದು ಜಾನದಿಂ ಸ್ಫುರಿಸಿದ ತ ||
ತ್ಸ್ವರತರಸಂ ಸ್ಮರಜೀವನ |
ಕರಮೊಂದವಧರಿಸವೇಳ್ಕುಮಲಿ ಕಾದಲರಿಂ ||೨೬||

ಕಂ|| ಅನುಚಿತಮಲೆ ಮುಪ್ಪಿನೊಳಂ |
ಮನುಜರ್ಸ್ಮರನಾಟಕಾಟಿಪುದುಮುಸಿಯುಗ್ರಂ ||
ಸ್ತನಮಿಳಿವನ್ನೆವರಂ ಜೀ |
ವನಮುಂ ಸಾರತಮನಬ್ಜಜಂ ಮಾಡದುದುಂ ||೨೭||

ವೃ|| ಧರಣಿಯೊಳಾವನಾಸೆಗಡಲಂತಮನೆಯ್ದಿದನೆಮ್ಮ ಜ್ಞಾ
ನಂ | ಪರಿಪಡೆ ದೇಹದಿಂ ಗಳಿಸಿದರ್ಥದಿನಿನ್ನೆಮಗೇಂ ಪ್ರಯೋಜನಂ |
ತೆರಳ್ದಪೆವೆಮ್ಮ ಮಂದಿರಕೆ ನೈದಿಲೆಗಣ್ಗಳ ಕೂರ್ತ್ತಪೆಣ್ಗಳೊ | ಳ್ಪರಿ
ನಡತರ್ಪ್ಪ ಪಾಪಿಜರೆ ಲೋಪಿಸುವನ್ನೆಗಮಾವಿಳೇಶ್ವರಾ ||೨೮||

ವೃ|| ಎಣಿಸಲ್ ರಾಗದ ಬೀಡು ಮೋಹ್ ನರಕದುಃಖಂಗಳ
ದಾಡುಂಬೊಲಂ | ಕಣಿ ಸಂಮೋಹಕೆ ಕಾಮರ್ಗ್ಗಿಲ್ಗಡಣಮಾದ
ಜ್ಞಾನಚಂದ್ರಂಗೆ ಪೂ || ಗಣೆಯಂಗಳ್ಕರ ಮಿತ್ರನಿನ್ನುಸಿರ್ವ್ವದೇಂ ದೊ
ಷಂಗಳೆಲ್ಲಕ್ಕೆ ಕಾ | ರಣ ಮಾ ಯೌವನಮಿನ್ನನರ್ಥಮಿದರಿಂ ಬೇರುಂ
ಲೋಕಂಗಳೊಳ್ ||೨೯||

ವೃ|| ಜಲದಂ ಶೃಂಗಾರಭೂಮಿಜಕೆ ಪೂಳೆ ನವಕೇಳೀರ
ಕ್ಕಿಷ್ಟಮಿತ್ರಂ | ಮಲರಂಬಂಗಿಂಗಡಲ್ ಜಾಣ್ಣುಡಿ ರತುನಕೆ ಚಂದ್ರ
ವಧೂದೃಕ್ಚಕೋರಾ || ವಳಿಗುದ್ಯದ್ದ್ರೂಪಸಂಪತ್ತಿಗೆ ನಿಧಿಯೆನಿಪಿ
ಯೌವನಂ ಪೊರ್ದ್ದಿಯುಂ ಭೂ | ತಲದೊಳ್ ಚೇತೋವಿಕಾರಂಬ
ಯದ ಮನುಜಂ ಪೇಳಲೇಂ ಮೃಗ್ಯನಲ್ತೇ ||೩೦||

ವೃ|| ತಾವರೆಗಣ್ಣಿನಚ್ಚಬೆಳುದಿಂಗಳ ಬಣ್ಣದುರೋಜಕುಂ
ಭಾ | ರಾವಹನಮ್ರಮಧ್ಯದ ರಣನ್ಮಣಿಕಾಂಚಿಯ ಚಂಚಲಾಂ

ಯರ್ || ತಾವೆಡೆಗೊಳ್ಳದಿರ್ದೊಡೆ ಕುಸಂಸ್ಕೃತಿಯೊಳ್ ಸಮುದಾತ್ತ ಚಿತ್ತಮಂ | ಕೋವಿದರೀವರೇಂ ಕುನೃಪಗೇಹಕವಾಟವ ಕಾವಸೇವೆಗಂ||

ವೃ|| ಹರವೃಷಶೃಂಗಭುಗ್ನತರುವಿಂ ಮುನಿವಾಸಿತಕಂದರಂಗಳಿಂ || ಪರಿವುರುಗಂಗೆಯಿಂ ಸೊಗಮನೀವ ಹಿಮಾದ್ರಿಯ ತಪ್ಪಲಿರ್ಪಿನಂ || ಸ್ಮರವಿಜಯಾಸ್ತ್ರಮಪ್ಪ ಹರಿಣಾಕ್ಷಿಯರಿಲ್ಲದೊಡುತ್ತಮಾಂಗಮಂ | ಪರನಮನಕ್ರಿಯಾಮಲಿನಮಂ ಗೆಯಲಾಟಿಪರೇಂ ಮನಸ್ವಿಗಳ್ ||೩೨|

ಕಂ|| ಘಡ ಸಂಸಾರಮೆ ನಿನ್ನಯ |
ತಡಿಗಾಣ್ಬುದು ಕಷ್ಟಮಲ್ತು ನಿನ್ನಂತರದೊಳ್ ||
ಕಡೆವಾಯುಲರಿದೆನಿಪ್ಪೀ |
ಬೆಡಗಿನ ಮಡದಿಯರ್ಗಳಿಲ್ಲದೊಡೆ ನಿಜದಿಂದಂ ||೩೩||

ವೃ|| ಕುಡು ವನದೇಣಿಗಳ್ಗೆ ಪರಿತೀಕ್ಷ್ಣಶಿಲಾಂಚಲದಿಂದೆ ಮೂಲಮಂ | ಬಿಡಿಸಿ ಕರೀರದಂತೆ ಪಸುರೇರಿದ ಪೊಚ್ಚಗರುಂಕೆಮೇಪಮೇಣ್ || ಕುಡು ಶುಕವಾಣಿಯರ್ಗೆ ಶಕದೇಶವಧೂಸುಕಪೋಲದಂತೆ ಬೆ | ಳ್ಪಿಡಿದು ತೊಳಪ್ಪ ವೀಳೆಯವ ಸೆಳ್ಳುಗುರಿಂದುಡಿದೊಲ್ಮೆಯಿಂದೆ ನೀಂ ||೩೪||

ವೃ|| ಎಡೆಗೊಂಡೀ ವನಿತಾದಿ ದುರ್ವಿಷಯಮೆಲ್ಲಂ ದೋಷಕಾಡುಂಬೊಲಂ | ಕಡೆಯೊಳ್ ನೀರಸಮುಂ ನಿರರ್ಥಮುಮೆನುತ್ತಂ ಮಾಣ್ಗೆ ಬಲ್ಲರ್ದಲಾ || ದೊಡಮೇಂ ಲೋಕಹಿತಾರ್ಥದಿಂ ಪಿರಿದು ಪುಣ್ಯಂ ಬೇರದೊಂದಿಲ್ಲ ನೋ | ಳ್ಪೊಡೆ ಸಾರಂ ಸರಸೀರುಹಾಕ್ಷಿಯರಿನೋರಂದಿಲ್ಲ ಸಂಸಾರದೊಳ್ ||೩೫||

ಕಂ|| ತಕ್ಕರ್ ಮತ್ಸರಮಂ ಮಾ |
ಣ್ದೊಕ್ಕಣಿಸುಗೆ ಸೇವ್ಯಮಾವುದವನೀತಳದೊಳ್ ||

ಸೊಕ್ಕುಂಜೌವನೆಯರ್ಕಳ |
ಮಿಕ್ಕ ನಿತಂಬವೊ ಮಹೀಧ್ರದ ನಿತಂಬವೊ ಮೇಣ್ ||೩೭||

ವೃ|| ಕನಸಿನ ಮಾಳ್ಕೆಯಿಂ ಪೊಳೆದಡಂಗುವ ಸಂಸೃತಿಯಲ್ಲಿ
ಸಾರವಿ | ಜ್ಜನಕೆರಡಂಗವೊಂದು ಪರತತ್ವವಿಚಾರಸುಧಾರಸಾವಗಾ ||
ಹನದೊಳೆ ಕಾಲಮಂ ಕಳೆವುದಲ್ಲದೊಡಿಂದುಮುಖೀನಿರಂತರ | ಸ್ತನ
ಪರಿರಂಭಸೌಖ್ಯದೊಳೆ ಕಾಲವ ನೂಂಕುವುದೊಂದು ಧಾತ್ರಿಯೋಳ್ ||

ಕಂ|| ವರಮಾವಾಸಂ ಗೆಯ್ವುದು |
ಸುರಗಂಗೆಯ ಪಾಪಹಾರಿವಾರಿಯೊಳಂ ಮೇಣ್ ||
ಸರಸೀರುಹಲೋಚನೆಯರ |
ಸರಸಮನೋಹಾರಿ ಹಾರಿ ಕುಚಯುಗಳದೊಳಂ ||೩೮||

ವೃ|| ಒರೆದೇಂ ಯುಕ್ತಿನಿಯುಕ್ತಮಲ್ಲದ ವೃಥಾಲಾಪಂಗಳಂ
ಮಾನವ | ರ್ಗೆರಡೇ ಸೇವಿಸತಕ್ಕುವಾವೆನಲವಂ ನಿರ್ಣೈಸುತಾಂ
ಪೇಳ್ದಪೆಂ || ಸ್ಮರಲೀಲಾಲಸಸುಂದರೀಜನರ್ಗಳಾ ಪೀನಸ್ತನದ್ವಂದ್ವದು|
ರ್ಭರಭಾರಾವಹಭಿನ್ನಮೆಂದೆನಿಸಿದೇರುಂಜೌವನಂ ಮೇಣ್ವನಂ ||೩೯||

ಕಂ|| ಎನಗಿಲ್ಲ ಪಕ್ಷಪಾತಂ |
ಜನಮೆ ವಿನಿಶ್ಚಯಮನುಸಿರ್ವೆನಾಲಿಪುದೊಲವಿಂ ||
ವನಿತೆಯರನುಳಿದು ಲೋಕದೆ |
ಮನೋಜ್ಞಮುಂ ದುಃಖಹೇತುವುಂ ಪೆರವಿಲ್ಲಂ ||೪೦||

## ಕಾಮಿನೀಗರ್ಹಣಂ.

ವೃ|| ತಿಳಿದರುಮಕ್ಕಟಾ ಅಶುಚಿಭಸ್ತ್ರಿಕೆ ಯೆಂದೆನಿಸಿಪ್ಪ
ಪೆಣ್ಣ ಕಂ | ಡಳಿಕಚೆಯೆಂದು ಕುಂಭಕುಚೆಯೆಂದು ವಿಶಾಲನಿತಂಬೆ
ಯೆಂದು ನಿ || ರ್ಮಳಶಶಿವಕ್ತ್ರೆಯೆಂದು ದಳಿತೋತ್ಪಲಲೋಚನೆಯೆಂದು

ಸೊಕ್ಕುವ | ನ್ನ೯ಲಿದಪರೊಂದುವರ್ ಪೊಗಳ್ವರೆನ್ನದೊ ದುಷ್ಟವಿಮೋಹ
ಚೇಷ್ಟಿತಂ ||೪೧||

ಕಂ|| ನೆನೆಯಲ್ತಾಪವನವಲೋ |
ಕನಂಗೆಯಲ್ ಚಿತ್ತವಿಭ್ರಮವನಂಟಿದೊಡೊ ||
ಯ್ಯನೆ ಮೋಹವನಾಗಿಪ ಕಾ |
ಮಿನಿಯಂ ಪ್ರಿಯೆಯೆಂದದೆಂತು ನುಡಿಯಲ್ಬರ್ಕ್ಕುಂ ||೪೨||

ಕಂ|| ಕಣ್ಣಿದಿರೊಳಿರ್ಪ್ಪ ವರೆಗಮೆ |
ಪೆಣ್ಣಮೃತಕೆ ಸಾಟಿಯೆಂದು ಪೇಳಲ್ಬರ್ಕುಂ ||
ಕಣ್ಣಿನ ಪೊಲಬಂ ಮೀರಿದೊ |
ಡಣ್ಣಾ ಬಿಸದಿಂದಮಧಿಕಮೆನಿಸುಗುಮಲ್ತೇ ||೪೩||

ಕಂ|| ರಮಣಿಯುರನುಳಿದು ಬೇರಿ |
ನ್ನಮೃತಂ ವಿಷಮೆಂಬುವಿಲ್ಲ ಲೋಕದೆ ನಿಸದಂ ||
ಅಮೃತಲತೆ ಯೆನಿಪಳೊಲಿದಂ |
ದಮಮಾ ತಾನೊಲಿಯದಂದು ವಿಷಲತೆಯೆನಿಪಳ್ ||೪೪||

ವೃ|| ಸುಳಿ ಸಂದೇಹಕ್ಕೆ ಧೂರ್ತತ್ವಕೆ ನೆಲೆವನೆ ಮೋಣ್ಸಾಹಸ
ಕ್ರೂರು ಮೋಸಂ | ಗಳ ತಾಣಂ ಕೃತ್ರಿಮಕಟ್ಟಣೆ ನರಕಮುಖಂ
ಸ್ವರ್ಗಸೌಖ್ಯಕ್ಕೆ ವಿಘ್ನಂ || ಬಳವನ್ಮಾಯಾಕರಂಡಂ ವಿಷಮುಮಮೃ
ತಮುಯಂ ಪ್ರಾಣಿಲೋಕಂಗಳಂ ಕ | ಟ್ಟಿಳಿಪುದ್ಯತ್ಪಾಶಮುಂ ತಾನೆ
ನಿಸಿದ ವನಿತಾಯಂತ್ರಮಂ ಗೆಯ್ದನಾವಂ ||೪೫||

ವೃ|| ಅಸಿಯುಳ ವಕ್ತ್ರಮಾಗಿ ಸಸಿ ಪುಟ್ಟಿದುದಲ್ಲೊಡಲುಂ
ಸುವರ್ಣದಿಂ | ದೆಸಗಿದುದಲ್ಲ ನೈದಿಲೆಗಳಕ್ಷಿಗಳಾದುವುಮಲ್ಲವಾರಯಲ್|
ನಿಸದಮಿದೆಂಬುದಂ ತಿಳಿದುಮಜ್ಞಜನಂ ಕವಿವಂಚಿತೈಕಮಾ | ನಸಮು
ಸೃಗಸ್ಥಿ ಮಾಂಸಮಯಮಾದಬಲಾಂಗಮನೋಪ್ರೊ ಸೇವಿಪರ್ ||೪೬||

ಕಂ|| ಮೋಸಂಬೋದಪನಲ್ತೆ ವಿ |
ಲಾಸಿನಿಯರ ಸಹಜಮಹ ವಿಲಾಸಕಮಜ್ಞಂ ||
ಆಸೆ ಮಿಗೆ ಬರಿದೆ ನಳಿನಿಯ |
ನೈಸರ್ಗಿಕರಾಗಕಾಟಿಪಂತಿರೆ ಮಧುಪಂ ||೪೭||

ಕಂ|| ಚೆಂದುಟಿ ಮಧುವೆರೆದಾ ಪೂ |
ರ್ಣೇಂದುವನಿಳಿಕಯ್ವ ಯುವತಿಯರ ಮುಖಕಮಲಂ ||
ಇಂದಿನಿದನಾಗಿಕುಂ ಮಾ |
ಕಂದದವೋಲ್ ಮುಂದದಿಟ್ಟವಣ್ಗೆಣೆಯಕ್ಕುಂ ||೪೮||

ಕಂ|| ವಳಿ ತೆರೆ ಮೊಗಮಬ್ಜಂ ಪೊ |
ರ್ಕ್ಕುಳಿ ಸುಳಿ ಮೊಲೆ ಚಕ್ರಮೆನಿಪ ಪೆಣ್ಬೊಳೆಯತ್ತಂ ||
ಸುಳಿಯದಿರಿ ಜನರೆ ಸಂಸೃತಿ |
ಜಳನಿಧಿಮಜ್ಜನದಪೇಕ್ಷೆ ನಿಮಗಿಲ್ಲದಿರಲ್ ||೪೯||

ಕಂ|| ಉಗುಳುತೆ ಕಟಾಕ್ಷವಿಷಮಂ |
ಸೊಗಸೆಂಬಾ ಪೆಡೆಯನೆತ್ತಿ ಬಹುದಿದೊ ಲಲನೋ ||
ರಗಮತ್ತ ತೊಲಗು ಮಿತ್ರನೆ |
ಮೊಗಮಿಕ್ಕರಿದಗಿದ ನರನಕಡೆ ಮಂತ್ರಜ್ಞರ್ ||೫೦||

ಕಂ|| ನುಡಿದಪರೊರ್ವನೊಳೊರ್ವನ |
ಜೆಡಗಿಂದಂ ನೋಳ್ಪರೊರ್ವನಂ ಮಾನಸದೋಳ್ ||
ಎಡೆಗೊಂಡು ಚಿಂತಿಪರ್ ಪೋ |
ಮಡದಿಯರ್ಗಿನ್ನಾವ ಮಾನವಂ ಪ್ರಿಯನೆನಿಪಂ ||೫೧||

ಕಂ|| ಬಿಂಬೋಷ್ಠಮಾಂಸಕೆಳಸಿ ಭ |
ವಾಂಬುಧಿಯೊಳ್ ಸುಳಿವ ಮನುಜಮತ್ಸ್ಯಗಳಂ ಪೆ ||

ಣ್ಣಂ ಬಲೆಗೈದೈಸರನೆಂ |
ಬಂಬಿಗನೆಳೆದೊಡನೆ ಜೀಟವೆಂಕೆಯೊಳಡುವಂ ||೫೨||

ಕಂ|| ಅಮುಮು ಕುಚಗಿರಿಗಳಿಂ ದು |
ರ್ಗಮವೆನಿಸಿದ ಕಾಮಿನೀಕಳೇವರವನದೊಳ್ ||
ಗಮಿಸದಿರು ಹೃದಯಪಥಿಕನೆ |
ಸುಮಶರನೆಂದೆಂಬ ಚೋರನಿರ್ದ್ದಪನದರೊಳ್ ||೫೩||

ವೃ|| ವ್ಯಾಳಂ ಕಚ್ಚಿದವರ್ಗ್ಗೆ ವೈದ್ಯರೊಳರೂರೂರಲ್ಲಿ ಧರ್ಮಾರ್ಥಿಗಳ್ | ಕ್ಷ್ವೇಳಂ ತಾಮಿಳಿವಂತು ಮಾಳ್ಪರಕಟಾ ತೇಜಸ್ವಿಯುಂ ಭೋಗಿಯುಂ || ನೀಲಾಬ್ಜದ್ಯುತಿಯುಂ ಸುವಕ್ರಗತಿಯುಂ ತಾನಾದ ಕಾಂತಾದೃಗಂ | ತಾಲೋಕೋರಗದಷ್ಟನಾದೆನಗೆ ಮರ್ದ್ದುಂ ಮಂತ್ರಮೇನಿಲ್ಲಣಂ ||೫೪||

ವೃ|| ಇದು ಸವಿವೆತ್ತ ಗಾನಮಿದು ನೂತನನರ್ತನಮಿಂತಿದಚ್ಚಗಂ | ಪಿದು ಮೊಲೆಸೋಂಕು ರಯ್ಯಮೆನುತಂ ಸ್ವಹಿತೈಕತೆಯಾಂತು ಮುಂದಣ || ಗ್ಗದ ಪರಮಾರ್ಥಮಂ ಕಿಡಿಸಿದಿಂದ್ರಿಯಪಂಚಕದಿಂದೆ ಮೋಸವೋ | ದುದನಕಟಾರ್ಗ್ಗೆ ಪೇಳ್ವೆ ನರಿದಿರ್ದ್ದೊಡವಕ್ಕಳಿಪಾಂತು ಪೋಪೆನೇ ||೫೫||

ವೃ|| ಬಿಡಿಸಲ್ಮಂತ್ರಕೆ ಗಮ್ಯಮಲ್ತು ಪಲವುಂ ಮರ್ದ್ದಿಂದೆ ಬಾರಿಪ್ಪೆನೆಂ | ದೊಡೆ ತಾಂ ಸಾಧ್ಯಮದಲ್ತು ಶಾಂತಿಶತದಿಂದುಂ ಪೋಪುದಲ್ತಕ್ಕಟಾ || ನುಡಿಯಲ್ಕಾಗದ ಭಂಗಮಂ ತನುವಿನೊಳ್ಗೈದಾಗಳುಂ ಬೇವಸಂ | ಬಡಿಕುಂ ಸುತ್ತಿಸುತಕ್ಷಿಯಂ ಸ್ಮರಮಹಾಪಸ್ಮಾರಮೇಗೈವೆನಾಂ ||೫೬||

ವೃ|| ಕುರುಡಂಗಂ ದುರ್ಮುಖಂಗಂ ಕರಮುಪಗತಕುಷ್ಠಾವಿಲಂಗಂ ಜರಾಜ | ರ್ಜರಿತಂಗಂ ದುಷ್ಕುಲಂಗಂ ಕರಪದವಿಕಲಂಗಂ

ಸಮಂತೂರಿಚಂಗಂ || ಆರರೇ ಲಕ್ಷ್ಮೀಲವಾಪೇಕ್ಷೆಯಿನಧಿಕಮನೋ
ಜ್ಞಾಂಗಮಂ ತೆತ್ತು ನಿಚ್ಚಂ | ನೆರವೀ ನೈಪುಣ್ಯಸಸ್ಯಚ್ಛುರಿಕೆಯೆನಿಪ
ವೇಶ್ಯಾಜನಕ್ಕಾವನೊಲ್ವಂ ||೫೭||

ಕಂ|| ಸುಲಲಿತ ರೂಪೇಂಧನದಿಂ |
ಜ್ವಲಿಪ ಮನೋಜಾರ್ಚಿಯಲ್ತೆ ಬೆಲೆವೆಣ್ಣದರೋಳ್ ||
ಸಲೆ ಬೇಳಿದಪರ್ ಕಾಮುಕ |
ರೊಲವಿಂ ಯೌವನಮುಮಂ ನಿಜದ್ರವ್ಯಮುಮಂ ||೫೮||

ಕಂ|| ಜಾರಭಟಚೋರನಟವಿಟ |
ವಾರೋಚ್ಛಿಷ್ಟಕ್ಕೆ ಪಾತ್ರಮಾಗಿರುತಿರ್ಪ್ಪೀ ||
ವಾರಸ್ತ್ರೀಯರ ತುಟಿಯಂ |
ಪೀರುವನೇಂ ರಮ್ಯಮಾದೊಡಂ ಕುಲಪುರುಷಂ ||೫೯||

ಕಂ|| ಸುದತಿಯರ ವಚನದ್ರೊಳ್ಸಧೆ |
ಹೃದಯದೆ ಪರಿಕಿಪೊಡೆ ವಿಷಮೆ ತೀವಿರ್ಪ್ಪುದರಿಂ ||
ಮೊದಲೊಳಧರಮನೆ ಚುಂಬಿಸಿ |
ಹೃದಯಮನುರೆ ಮುಷ್ಟಿಯಿಂದೆ ಮರ್ದ್ದಿಪರಲ್ತೇ ||೬೦||

## ದುರ್ವಿರಕ್ತ ಸುವಿರಕ್ತ ಪದ್ಧತಿ.

ವೃ|| ಬಳೆದಡರ್ದಚ್ಚಜೌವನದೆ ಪೊಂಗಿದ ಪೀನಪಯೋಧರಂ
ಗಳಿಂ | ತೆಳುವಸಿರಲ್ಲಿ ರಂಜಿಪ ವಳಿತ್ರಯದಿಂ ಕರವೊಪ್ಪುತಿರ್ಪ್ಪ ಚಂ |
ಚಳಧವಳಾಯತಾಕ್ಷಿಯರ ಚೆಲ್ವಿಕೆಯಂ ನಡೆ ನೋಡಿ ಚಿತ್ತದೋಳ್ |
ಕಳವಳವೊಂದದಿರ್ಪ್ಪ ಮನುಜರ್ಗ್ಗಡ ಧನ್ಯರಿಳಾತಳಾಗ್ರದೋಳ್ ||

ವೃ|| ತರುಣಿ ಯಿದೇಕೆ ಬಲ್ಬೆಡಗಿನಿಂದರೆಮುಚ್ಚಿದ ಕಣ್ಣೊಳಿಮ್ಮ
ನೀಂ | ನಿರುಕಿಪೆ ಮಾಣ್ ವೃಥಾ ಶ್ರಮವಲಾ ನಿನಗಾವು ಪೊಸ

ಬರಿಂದು ಕೇಳ್ || ಕರೆವುದು ಕಾನನಂ ತೆರಳ್ದುದಾಹರೆಯಂ ಸರಿದತ್ತು ವೋಹವಿಾ | ಧರಣಿಯನೆಲ್ಲಮಂ ತೃಣಗಣಕ್ಕೆಣೆಯಾಗಿಸಿ ನೋಳ್ಪಿವಾಗಳುಂ ||೬೨||

ವೃ|| ಇಂದೀವರಾಂಗಿ ಯಿಡುತಿಪ್ಪಳದೇತಕೆನ್ನೊಳ್ | ಇಂದೀವರದ್ಯುತಿಯ ಕಳ್ದ ಕಟಾಕ್ಷಮಂ ತಾಂ || ಕಂದರ್ಪಬಾಣಕಲಿತಜ್ವರದಾಹಮೋಹ | ಕಂದಂ ಕಳಲ್ದುದೆಮಗಿನ್ನು ವರಾಕಿ ಮಾಣಳ್ ||

ವೃ|| ಅಲರಂಬಾ ಬರಿದೇಕೆ ನೀಂ ಸುಮಧನುಷ್ಟಂಕಾರಮಂಗೈದು ಕೂ | ರಲಗಂ ವ್ಯರ್ಥಮ ಮಾಳ್ಪೆ ಕೋಕಿಲಮೆ ನೀನೇಕಿಂಚರಂಗೈವೆ ನಿಲ್ || ಎಲೆ ಮುಗ್ಧೇ ಸವಿನೋಟಮಂ ಕೆದರ್ವುದಂ ಮಾಣ್ಮನ್ಮನಂ ಪೀರ್ದುದ ಜ ಲ್ಪಲವಿಂದಿಪ್ಪುದು ಚಂದ್ರಮೌಳಿ ಚರಣಧ್ಯಾನಾಮೃತಾಸಾರಮಂ ||೬೪||

ಕಂ|| ವಿರಹಮೆ ಸಂಗಮಮೆನಿಕುಂ |
ಪರಸ್ಪರಾಸಕ್ತಮುಪ್ಪೊಡಿರ್ವರ ಹೃದಯಂ ||
ವಿರಹಮನೆ ವಿಶೇಷಿಸುಗುಂ |
ಪರಿಕಿಸೆ ಸಂಗಮಮುಮೊಂದದಿರೆ ನಿಜಹೃದಯಂ ||೬೫||

ಕಂ|| ಇನಿಯಳ್ ಬರ್ದುಕಿಲ್ಲದೊಡಾಂ |
ಮನೆಗೆಯ್ದಿಯುಮೇನದೊರ್ಮೆ ಬರ್ದುಕಿರ್ದೊಡೆ ಪೋ ||
ಪ ನಿಮಿತ್ತಮೇನೆನುತ್ತಂ |
ಮನೆಗೆಯ್ದಂ ಪೊಸತು ಮುಗಿಲನೀಕ್ಷಿಸಿ ಪಥಿಕಂ ||೬೬||

ವೃ|| ಎಲೆ ಬುಧವರ್ಯರೇ ಕ್ಷಣಿಕಮಾದ ವಧೂಜನ ಸಂಗದಿಂದಮೇಂ | ಫಲಮೊಲವೆತ್ತು ಕೂಡಿಮೆ ದಯಾಮತಿಮೈತ್ರಿಗಳೆಂಬ ಪೆಣ್ಗಳಂ || ಸಲಹುವವೇಂ ಸಮಂತು ನರಕಾಂತದೆ ನಿಮ್ಮನಿವಂಗ

ನಾಜನಂ | ಗಳ ಮಣಿಹಾರಶೋಭಿ ಕುಚಮುಂ ರಶನಾವಿಲಸನ್ನಿ
ತಂಬಮುಂ ||೬೭||

ವೃ|| ಘನಯೋಗಾಭ್ಯಾಸದಿಂ ಭೋಗವಿರತಿ ಮಿಗೆ ತಳ್ತಾತ್ಮನೊ
ಳ್ಸಂಧಿಸಿತ್ತಾ | ವನ ಚಿತ್ತಂ ತನ್ಮಹಾಯೋಗಿಯ ಸೊಗವಡಿಸಲ್ಕಾ
ರ್ಪ್ಪರ್ವೇನಿನ್ನು ಕಾಂತಾ || ಜನದಾಲಾಪಂಗಳುಂ ಚೆಂದುಟಿಯ ಸವಿ
ಗಳುಂ ವಕ್ತ್ರಗಂಧಂಗಳುಂ ಮೇಣ್ | ಸ್ತನಸಂಶ್ಲೇಷಂಗಳುಂ ಪೊಂಗಿದ
ಸುಸಿಲ ವಿಲಾಸಂಗಳುಂ ನಾಡೆ ನೋಡಲ್ ||೬೮||

ಕಂ|| ಸ್ಮರತಿಮಿರಭವಾಜ್ಞಾನದೆ |
ಪೊರೆದೆಮ್ಮೆಯ ಕಣ್ಗೆ ಯುವತಿಮಯಮಾಯ್ತು ಜಗಂ ||
ಪರಮವಿವೇಕಾಂಜನವಿಡ |
ಲರರೆ ಜಗತ್ತ್ರಯಮುಮಿಂದು ಬೊಮ್ಮಮೆನಿಕ್ಕುಂ ||೬೯||

ಕಂ|| ತರುಣ ಹರಿಣಾಕ್ಷಿಯರ್ಕಳ |
ತರಳಕಟಾಕ್ಷಂಗಳ್ಬೈದೆ ತಾಗದವರೆಗಂ ||
ಸ್ಫುರಿಸಿದಪುದಲ್ತೆ ವಿದಾಂವ |
ಸರ ನಿರ್ಮಲತರವಿವೇಕರೂಪಂ ದೀಪಂ ||೭೦||

ಕಂ|| ಬಾಯವಿರಕ್ತಿಯೊಳೇಂ ಕಂ |
ಜಾಯತನೇತ್ರೆಯರ ಕನಕಕಾಂಚೀದಾಮ ||
ಶ್ರೀಯುತಜಘನವನುಳಿದಿಹು |
ದಾಯಸಮೆಂತಪ್ಪ ಪಂಡಿತರ್ಗ್ಗಂ ಜಗದೊಳ್ ||೭೧||

ಕಂ|| ಚಂಡಮೃಗಪತಿಯ ಮದವೇ |
ತಂಡಮನಿಕ್ಕುವ ಸಮರ್ಥರಿರ್ಪ್ಪರ್ಪ್ಪಲವರ್ ||
ಪಂಡಿತರಿದಿರುಸಿರ್ವೆಂ ಸುಮ |
ಕಾಂಡನಬಲ್ಪೊರ್ಕ್ಕನಿಕ್ಕಲಾರ್ಪ್ಪರ್ ಕೆಲವರ್ ||೭೨||

ವೃ|| ಧೃತಿಯುಂ ಪಾಳ್ಗೆವ ಲೀಲಾವತಿಯರ ಕುಟಿಲಭ್ರೂಧ
ನುಃಕೃಷ್ಟಮುಕ್ತಾ | ಸಿತಪಕ್ಷ್ಮಾಪಾಂಗಬಾಣಂ ಶ್ರುತಿಗತಮೆರ್ದೆಯುಂ
ತಾಗಿ ಥಟ್ಟುಚ್ಚೞ್ದನ್ನಂ || ಶ್ರುತಿಮಾರ್ಗಾಚಾರಮುಂ ಸದ್ವಿನಯನಯ
ವಿವೇಕಂಗಳುಂ ಸಾರಧರ್ಮ | ಸ್ಥಿತಿಯುಂ ನಾಣುಂ ಸಮಂತಿಂದ್ರಿಯ
ವಿಜಯತೆಯುಂ ಮಾನವಂಗಿರ್ಕುಮಲ್ತೇ ||೭೩||

ಕಂ|| ತರುಣಿಯರಂ ಪಳಿವಾತನೆ |
ಪರವಂಚಕವಿಬುಧನೆಂತೆನಲ್ ಸ್ವರ್ಗಮೆ ತಾಂ ||
ನರರ ತಪಃಫಲಮಿನ್ನು |
ಳ್ಳಿರುವರ್ ಸುರತರುಣಿಯರ್ಕಳಲ್ಲದೆ ಪೆರರಾರ್ ||೭೪||

ಕಂ|| ಪ್ರೇಮೋದ್ರೇಕದೊಳಾವುದ |
ಕಾಮಿನಿಯರ್ಕ್ಕುಡುಗಿ ಮಾಡಲಾರಂಭಿಪರಾ ||
ಕಾಮಿತಕೆಡರನೊಡರ್ಚ್ಚಲ್ |
ತಾಮರಸೋದ್ಭವನುಮೊರ್ಮೆ ತಾನಾರ್ತ್ತಪನೇ ||೭೫||

ಕಂ|| ಅಂದಿನ ವರೆಗಮೆ ನಯವಿನ |
ಯಂ ದಾಕ್ಷಿಣ್ಯಂ ಕುಲೀನತಾದಿಗಳೆಲ್ಲಂ ||
ಕಂದರ್ಪಬಾಣಶಿಖಿ ಪಾ |
ಯ್ತಂದೆರ್ದೆಯೊಳ್ ಜ್ವಲಿಸದಿಪ್ಪುದೆಂದಿನವರೆಗಂ ||೭೬||

ವೃ|| ಪರಿಕಿಸೆ ಶಾಸ್ತ್ರಮಂ ತಿಳಿದೊಡಂ ಸುವಿವೇಕನಿಧಾನರಾ
ದೊಡಂ | ಪರಗತಿಗೈದಲಾರ್ತ್ತಪನದೊರ್ವನೆ ಸಂಸೃತಿಯೊಳ್ದಲೇ
ಕೆಸಲ್ || ನರಕದ ಬಾಗಿಲಂ ತೆಗೆವ ಲೋಹದ ಕುಂಚಿಕೆಯಂತೆ ನೀಳ್ದ
ಸುಂ | ದರಿಯರ ಕೊಂಕುವೆತ್ತ ನಿಡಿವುರ್ವ್ವದರೊಳ್ನೆಲಸಿಪ್ಪ ದೂಸರಿಂ||

ವೃ|| ಕಡುಬಡವಾಗಿ ಕಣ್ಣುಡುಗಿ ಬಾಲಮುಡಂಗಿ ಕೊಡಂಕೆ
ಪೋಗಿ ಪು | ಣ್ಣಿಡಿದೊಡಲೆಲ್ಲಮುಂ ಪುಳಿತು ಮುತ್ತು ಕರಂ ಪಸಿವಿಂದೆ

ಬಾಡಿ ಕಾ || ಉಡುಗಿದ ಕುಂಡಿಕಾಮುಖಗಳಂ ಶುನಕಂ ಶುನಿಯಂ
ಸಮಂತು ಬೆಂ | ಬಿಡದೆನೆ ಬಾರಿಪಂ ಮಡಿವ ಜೀವಿಯುಮಂ ಗಡ
ಪಾಪಿ ಮನ್ಮಥಂ ||೭೮||

ವೃ|| ಪುರುಷಾರ್ಥಾವಹವಾದ ಕಾಮವಿಜಯಸ್ತ್ರೀಮುದ್ರೆಯಂ
ಮಾಣ್ದು ಪಾ | ಮರರ್ಗಳ್ ದುರ್ಮತಿಗಳ್ ತೊಳಲ್ವರಕಟಾ ಮಿಥ್ಯಾ
ಫಲಾನ್ವೇಷಿಗಳ್ || ಸ್ಮರನಿಂದಂತವರ್ಗಾದ ಪಾಡನದನೇನೆಂಬೆಂ ಕೆಲಂ
ಬರ್ ದಿಗಂ | ಬರರಾದರ್ ಜಟೆಗಳ್ಕೆಲರ್ ಧೃತಕಪಾಲರ್ಮ್ಮೋಣ್ಕೆಲರ್
ಮುಂಡಿತರ್ ||೭೯||

ವೃ|| ಜಲಪರ್ಣಾನಿಲಮೂಲಮಂ ಸವಿದ ವಿಶ್ವಾಮಿತ್ರಮುಖ್ಯ
ರ್ಕ್ಕಳುಂ | ಲಲನಾಸ್ಯಾಂಬುಜಮಂ ವಿಲೋಕಿಸಲೊಡಂ ಬೆಳ್ಪಾದರೆಂಬಾ
ಗಳೆ || ನ್ನಿಳೆಯೊಳ್ ಪಾಲೊಸಗೂಡಿದೋಗರವನಾರೋಗಿಪ್ಪ
ಮರ್ತ್ಯರ್ಗ್ಗೆ ಸಂ | ಗಳಿಪಂದಿಂದ್ರಿಯನಿಗ್ರಹಂ ಶರಧಿಯೊಳ್ ವಿಂಧ್ಯಾದ್ರಿ
ತೇಲ್ದುಂ ವಲಂ ||೮೦||

## ಋತುವರ್ಣನೆ.

ವೃ|| ಮಗಮಗಿಸಿತ್ತಿಲರ್ ಮಿಗೆ ತಳಿತ್ತುವು ಕಾನನಶಾಖಿಶಾಖೆ
ಗಳ್ | ಮುಗುಳಿನಿಮಾವೊಳುತ್ಕಲಿಕೆಯಂ ಮಿಗೆ ತಾಳ್ದುದು ಕೋಕಿಲಾ
ಗಣಂ|| ಒಗೆದುವು ಮೆಲ್ಲಮೆಲ್ಲನೆ ಬೆಮರ್ ವನಿತಾಜನತಾಸ್ಮಿತಾನನೇಂ |
ದುಗಳೊಳದಾಗ್ರವಾಗದು ಗುಣೋದಯಮೈದೆ ವಸಂತನುರ್ವಿಯೋಳ್||

ಕಂ|| ಮಧುಮಲಯಾನಿಲಸಿಂ ಮೇ |
ಣ್ಮಧುರಪಿಕಾರಾವದಿಂದೆ ವಿರಹಿವ್ರಜಮಂ ||
ವಿಧುರಂಗೈದಪನಕ್ಕಟ |
ಸುಧೆಯುಂ ವಿಷಮಪ್ಪುದಲೆ ವಿಪತ್ತಿನೋಳಾದಂ ||೮೨||

ವೃ|| ಕೆಲದೊಳ್ ಶೃಂಗಾರಲೀಲಾಲಲಿತದಯಿತೆಯರ್ಕರ್ಣದೊ
ಳ್ಕೋಕಿಲಸ್ತ್ರೀ | ಕಲನಾದಂ ಮುಂತೆ ಗುಂಜನ್ಮಧುಪಸುಮಲತಾರಂಜಿ
ಕುಂಜಂ ಕವೀಂದ್ರಾ || ವಳಿಸಲ್ಲಾಪಾನುಮೋದಂ ಸದಮಳತರಚಂದ್ರಾ
ತಪಂ ಚಿತ್ರಮಾಲಾ | ಕುಲಮುಂ ಸಂತೋಷಿಕುಂ ಚೈತ್ರದೆ ಸುಕೃತ
ಜನಸ್ವಾಂತಮಂ ತಾಂ ನಿತಾಂತಂ ||೮೩||

ವೃ|| ರತಿಯಿಂದೀಕ್ಷಿಸೆ ಕೋಕಿಲಾವಿತತಿಪಾಂಥಸ್ತ್ರೀವಿಯೋ
ಗಾನಲಾ | ಹುತಿ ಸಾಮ್ಯಂಬಡೆದಾಮ್ರಮಂಜರಿಯನಾಗಳ್ ಮೆಲ್ಲನೂ
ದಿತ್ತಣಂ || ಹೃತತಾಪಂ ಸ್ಫುಟಪಾಟಲೀಪರಿಮಳಶ್ರೀತಸ್ಕರಂ ಚಂದನ |
ಕ್ಷಿತಿಭೃತ್ಸಾನುನಿಕುಂಜಮಂಜುನಿಲಯಂಚೈತ್ರಪ್ರಿಯಂಮಾರುತಂ ||೮೪||

ಕಂ|| ನೆಲೆಗೊಂಡಿರ್ಕೆ ಕರಂ ಕಾ |
ದಲೆಯರ ಮಾನಸದೆ ಬಲ್ಮೆವೆರಸಿದ ಮಾನಂ ||
ಮಲಯಜಮಹೀಜಸುರಭಿಲ |
ಮಲಯಾನಿಲನೈದಿ ನಾಡೆ ತೀಡುವ ವರೆಗಂ ||೮೫||

ಕಂ|| ಮಾವಿನ ಪೂವಿನ ಕಂಪಿಂ |
ತೀವಿದುವೆಂದೆನಿಸಿ ದೆಸೆಯನಳಿಗಳ ಮಧುಸಂ ||
ಸೇವನದೆ ಸೊರ್ಕಿಸಿದ ಮಧು |
ನಾವಂಗಾಗಿಸದು ಮನಕೆ ಬೇಟಮನಾದಂ ||೮೬||

ವೃ|| ಮಳಯಜಲೇಪದಿಂ ಕುಳಿರ್ವ ಕಾಂತೆಯರುಂ ಜಲಯಂತ್ರ
ಗೇಹಮುಂ | ಸುಳಿವೆಳೆಗಾಳಿಯುಂ ತೊಳಪ ಜೊನ್ನಮುಮುಜ್ವಳಪುಷ್ಪ
ಮಾಲೆಯುಂ || ಪಳುಕಿನ ಮಂಚಮುಂ ಬಿಳಿಯ ಮಾಡಗಳುಂ ತೆಳು
ವಟ್ಟೆಯುಂ ಸಮಂ | ತಳುರ್ವ ನಿದಾಘದೊಳ್ಬಳೆಯಿಕುಂ ನಲವಂ ಗಿಳಿ
ದೇರನುರ್ಕ್ಕಮಂ ||೮೭||

ವೃ|| ಬಗೆಗೊಳಲಾರ್ತ್ತ ಕಮ್ಮಲರ ಮಾಲಿಕೆ ತಂಗೊಳಮುಚ್ಚ
ಜೊನ್ನಮಿಂ | ಪೊಗೆದ ಫಲಾಸವಂ ಸುಮಪರಾಗಕುಲಂ ಸಿತಚಂದನ
ದ್ರವಂ || ಮೃಗದೃಶೆಯರ್ ಸುಧಾಧವಳಹರ್ಮ್ಯತಲಂ ಮೃದುವೀಜ
ನಾನಿಲಂ | ದುಗುಲಮಿವೊಚ್ಚತಂ ಸೊಗಯಿಕುಂ ಸುಕೃತಾತ್ಮಕರಂ
ನಿದಾಘದೊಳ್ ||೮೮||

ಪೃಥ್ವೀವೃ|| ಸುಧಾಧವಳಮಂದಿರಂ ಪ್ರವಿಲಸತ್ಕರಂ ಚಂದಿರಂ |
ವಧೂವದನವಾರಿಜಂ ಮಲಯಜಂ ಪ್ರಸೂನಸ್ರಜಂ || ಅಧೀರರಹ
ಕಾಮಿಗಳಧಿಕತಾಪಮಂ ಮಾಡುಗುಂ | ವಿಧೂತವಿಷಯರ್ಕ್ಕಳಾದರ
ನಿವೇನಣಂ ಕಾಡುಗುಂ ||೮೯||

ಕಂ|| ಕಾಮನನಾದಂ ಪೆರ್ಚ್ಚಿಸಿ |
ಕೋಮಲ ಜಾತೀಸುಗಂಧಮಂ ತಳೆದಿರ್ಪ್ಪ ||
ದ್ದಾಮಪಯೋಧರಭರೆ ವ |
ರ್ಷಾಮಹಿಳೆಯುದಾರ ಮನಕೆ ಮುದಮಂ ಮಾಡಳ್ ||೯೦||

ಕಂ|| ಪಸುರೇರಿದ ಧರೆ ಮುಗಿಲಿಂ |
ಮುಸುಕಿದ ಬಾನ್ ಕುಟಜಕುಸುಮಸುರಭಿಸಮೀರಂ ||
ಪೊಸಸೋಗೆಯ ಕೇಗುಂ ಸಂ |
ತಸಗೊಳಿಪುವು ಸುಖಿಯುಮಂ ಕರಂ ದುಃಖಿಯುಮಂ||೯೧||

ಕಂ|| ಮೋಗಡೆ ಮುಗಿಲ್ಗಳ್ ನರ್ತಿಪ |
ಸೋಗೆಗಳಿರ್ಕ್ಕೆಲದೊಳಿಳೆಯುಮಂಕುರದೆ ಬೆಡಂ ||
ಗಾಗಿರಲೆತ್ತಂ ಕಣ್ಗಳ |
ಸಾಗಿಸಿದ ಪರಕಟ ಮಾರ್ಗದೊಳ್ಪಥಿಕರ್ಕಳ್ ||೯೨||

ಕಂ|| ಒಂದೆಡೆ ಪೊಸಕೇದಗೆಗಂ |
ಪೊಂದೆಡೆ ಮಿಂಚುಗಳ ಬಳಗಮೊಂದೆಡೆ ಮೊಳಗಿ ||
ನ್ನೊಂದೆಡೆ ಸೋಗೆಗಳಿಂಚರ |
ಮೊಂದಿರೆ ವಿರಹಿಣಿಯರೆಂತು ಕಳೆವರೊ ದಿನಮಂ ||೯೪||

ವೃ|| ತಿಮಿರಂ ಸೂಜಿಗಭೇದ್ಯಮಾಗಿರೆ ವಿಯನ್ಮಧ್ಯಂ ಘನ
ಧ್ವಾನದಿಂ | ದಮಣಂ ಘುಮ್ಮೆಡೆ ಮಿಂಚೆಪೊಂದಗಡೆನಲ್ ತೋರ್ಮಿಂ
ಚು ವಾರ್ಬಿಂದು ಬೀ || ಳೆ ಮನೋರಾಗಮುಮಂ ಕರಂ ಮರುಕಮಂ
ಕೈಕೊಂಡುದಾಸ್ವೈರಿಣೀ | ಸಮುದಾಯಂ ನಿಜವಲ್ಲಭೋಪಗತಸಂಕೇತ
ಸ್ಥಲೀಮಾರ್ಗದೊಳ್ ||೯೫||

ವೃ|| ಮಳೆಯಿಂದಂ ಪೊರಗಣ್ಗೆ ಪೋಗಲರಿದಾಗಲ್ ಹರ್ಮ್ಯ
ಮಂ ಬಿಟ್ಟು ಮೇಣ್ | ಕುಳಿರ್ವಬ್ಜಾನನೆ ತಾನೆ ತಕ್ಕವಿಸೆ ನೀಡುಂ
ಮೇಣ್ ಜಡಗ್ರಾಹಿ ಶೀ || ತಳವಾತಂ ರತಿಖೇದಮಂ ಕಳೆಯೆ ಪೋ
ಕೂರ್ತ್ತಂಗನಾಸಂಗಮಂ | ಗಳದೊಳ್ ದುರ್ದಿನಮುಂ ಗಡಾ ಸುದಿನ
ಮಕ್ಕುಂ ಪುಣ್ಯವಂತರ್ಗ್ಗಣಂ ||೯೬||

ವೃ|| ಇರುಳರ್ಧಂಬರೆಗಂ ಮಲಂಗಿ ರತಿಗೆಯ್ದಾಯಾಸದಿಂ
ಬೆಂಡುಗೊಂ | ಡಿರೆ ಮೈಬಾಯರತಾದಮಾಸವಮುದಾಂಕಂ ಪೂತಹ
ರ್ಮ್ಯಾಂತದೊಳ್ || ಸುರತಶ್ರಾಂತವಧೂಟಿಕಾಶಿಥಿಲ ಬಾಹಾಮುಕ್ತ
ಚಂದ್ರಾಂಶುಪಾಂ | ಡುರಧಾರಾಂಚಿತಕರ್ಕರೀಸಲಿಲಮಂ ಭಾಗ್ಯಾ
ಧಿಕಂ ಪೀರ್ದ್ದಪಂ ||೯೭||

ವೃ|| ಪೊಸಕಿಸುವಟ್ಟೆಯಂ ತಳೆದು ಪಾಲ್ಮೊಸರ್ನೆಯ್ಗಳನುಂ
ಡೊಡಲ್ಗಳಂ | ಘುಸೃಣರಸಾಂಬುವಿಂ ಪೊರೆದು ವೀಳೆಯಮಂ
ಸವಿದೀಹಿಮರ್ತ್ತುವೊಳ್ || ಅಸಿಯರ ಪೀವರಸ್ತನಮುರಂ ಬೊಗಲಪ್ಪಿ

ಗೃಹಾಂತರಾಳದೊಳ್ | ಸುಸಿಲ ಬಳಲ್ಕೆಯಿಂ ಸೊಗಸಿನಿದ್ರಿಸುವರ್ ಗಡ
ಭಾಗ್ಯಶಾಲಿಗಳ್ ||೯೭||

ವೃ|| ಕುವಳಿತಪ್ರಿಯಂಗುಕುಳದಿಂ ವಿದಳನ್ನವಕುಂದವಾದ್ಯ
ದಿಂ | ದಿಂದಿರಬೃಂದದಿಂ ಹಿಮಮರುಚ್ಚಲಮಂಜುಳ ಪಾರಿಭದ್ರದಿಂ ||
ಸುಂದರವಾದ ಕಾಲದೆ ಹಿಮಂಗಳಿವಂಗನೆಯಾರ ಕಂಠಮಂ | ಸಂದಿ
ಸಳಂತವರ್ಗೆಣೆಸಲಂದಿಸಿದುಳ್ ಯಮಮಂದಿರೋಪಮಂ ||೯೮||

ವೃ|| ಲಲನೆಯರೊಳ್ದಂಪುಗಳ ಚುಂಬಿಸಿ ಮುಂಗುರುಳೊಂ
ದಿದಾಸ್ಯಮಂ | ಡಲದೆ ನಿಮಿರ್ಚಿ ಸೀತ್ಕೃತಿಯ ಕಂಚುಕದಿಂ ಬಿಗಿ
ಸಿರ್ಪ ಬಟ್ಟಬ || ಲ್ತೊಲೆಯೊಳೊಡರ್ಚಿ ಪೊಂಪುಳಿಯನುಟ್ಟುಡೆಯಂ
ಕೆಲಸಾರ್ಚಿ ಕಂಪನಂ | ಗೊಳಿಸಿ ತದೂರುವಂ ವಿಟನೆನಲ್ ಸುಳಿವಂ
ಶಿಶಿರರ್ತು ಮಾರುತಂ ||೯೯||

ವೃ|| ಕೆದರುತ್ತುಂ ಕೇಶಮಂ ಕಣ್ಗಡೆಯ ಮುಗಿಸುತಂ ವಸ್ತ್ರ
ಮಂ ಪಾರಿಸುತ್ತುಂ | ಪದಪಿಂ ರೋಮಾಂಚಮಂ ಪುಟ್ಟಿಸುತವೊಡ
ಲೊಳಾಕಂಪವಂ ಪೆರ್ಚಿಸುತ್ತುಂ || ಉದಯತ್ಸೀತ್ಕಾರದಿಂದಂ ಕದ
ಕದಿಸುವ ಬಿಂಜೋಷ್ಠಮಂ ಪೀಡಿಸುತ್ತುಂ | ಸುದತೀಸಂತಾನದೊಳ್
ಕಾಂತನೆನೆ ಸುಳಿಪಂ ಶೈಶಿರಂ ಮಾತರಿಶ್ವಂ ||೧೦೦||

ಶೃಂಗಾರಶತಕಂ ಸಂಪೂರ್ಣಂ.



# ಕನ್ನಡ ಭರ್ತೃಹರಿ ಸುಭಾಷಿತಂ.



## ವೈರಾಗ್ಯಶತಕಂ.



### ತೃಷ್ಣಾದೂಷಣಪ್ರಕರಣಂ.

ವೃ|| ತಲೆದೊಡವಾದ ಚಂದ್ರಕಲೆಯೆಂಬ ಲಸಚ್ಛಿಖೆಗೂಡಿ ಚಿತ್ತ
ಭೂ | ಶಲಭನ ಸುಟ್ಟು ಪುಣ್ಯದಶೆಯೊಳ್ ಸ್ಫುರಿಸುತ್ತಮಪಾರಮೋಹ
ಸಂ || ಕುಲತಮಮೆಲ್ಲಮಂ ಜವದೊಳೋಡಿಸಿ ಮಂಜುಳಶೋಭೆವೆತ್ತ
ಮಂ | ಗಳಕರಚಿತ್ರದೀಪನೆಸೆವಂ ಮುನಿಮಾನಸಪದ್ಮದೊಳ್ ಶಿವಂ ||೧||

ವೃ|| ಅಡಿಯಿಡಲಾಗದಿರ್ಪೆಡೆಯನೆಲ್ಲವ ಸುತ್ತಿದೆನೇನುಮಿಲ್ಲದಾ |
ಯ್ತುಡುಗಿ ಕುಲಾಭಿಮಾನಮನೊಡರ್ಚಿದ ಸೇವೆಯುಮಾಯ್ತು ನಿಷ್ಫ
ಲಂ || ಕಡೆಗೆ ಪರಾನ್ನಮಂ ಸವಿದೆನಕ್ಕಟ ಮಾನವಮಾಣ್ದು ಕಾಗೆ
ಪೋಲ್ || ಬಿಡೆ ಯಿನಿತಾದೊಡೆನ್ನನಳಿಯಾಶೆಯೆ ಬೀಗುತಮಿರ್ಪೆಯೀ
ಗಳುಂ ||೨||

ವೃ|| ಅಗುಳ್ದೆಂ ನಿಕ್ಷೇಪಶಂಕಾಶಯದೆ ಮಹಿಮೆಯಂ ಪೊನ್ನಪ್ಪ
ದೆಂದದ್ರಿಭೂಧಾ | ತುಗಳೆಲ್ಲಂ ಸುಟ್ಟೆನುರ್ವೀಶರ ನೊಲಿಸಿದೆನಂಭೋ
ಧಿಯಂ ದಾಂಟಿದೆಂ ಮೇಣ್ || ಬಗೆಯಂ ಕಲ್ಮಾಡಿ ಮಂತ್ರಂ ಜಪಿಸೆ
ಮಸಣದೊಳ್ ನೂಂಕಿದೇನಕ್ಕಟಾ ರಾ | ತ್ರಿಗಳಂ ಕೈಸಾರ್ದುದಿಲ್ಲಂ
ಕುರುಡುಗವಡೆಯುಂ ತೃಷ್ಣೆ ನೀಂ ತೃಪ್ತಿಯಾದಾ ||೩||

ವೃ|| ಅರಸರ ಮೆಚ್ಚಿಸಲ್ ಸಹಿಸಲಾಗದ ಮಾತುಮನೆಲ್ಲಸೈಸಿ
ಮೇಣ್ | ಪಿರಿದಳಲಿಂದೆ ಪಾರಿಬಹ ಕಂಬನಿಯಂ ಬಿಡದೌಂಕಿಬಲ್ಪಿನಿಂ||
ಬರಿನಗೆದೋರಿ ವಿತ್ತಮದದಿಂ ಮರವಟ್ಟರೆಯುಂ ಸುಭೀತಿಯಿಂ| ದೆರಗಿದೆ
ನಿನ್ನದೇಂ ಕುಣಿಪೆಯೆನ್ನ ದುರಾಶೆಯೆ ಸೊಲ್ಲಿಸಕ್ಕಟಾ ||೪||

ವೃ|| ಹರಣಮಿದಬ್ಜಿನೀದಳಗತೋದಕಬಿಂದುವಿನಂತೆ ನೋಡಲ|
ಸ್ಥಿರಮಿದಕಾಗಿ ವಿತ್ತಮದದಿಂ ಮರವಟ್ಟ ಧನಾಢ್ಯರಲ್ಲಿ ನಾಂ|| ವರಗುಣ
ನೆಂದು ಸತ್ಯಸಿಧಿಯೆಂದು ಕಲಾವಿದನೆಂದು ಬುದ್ಧಿಗೆ | ಟ್ಟೊರೆಯುತೆ
ತನ್ನ ತಾಂ ಪೊಗಳ್ದ ಪಾತಕಕಂ ಗುರಿಯಾದೆನಕ್ಕಟಾ ||೫||

ವೃ|| ರಮಣೀಗೇಹಾದಿಯಂ ಮಾಣ್ದುದು ಸುವಿರತಿಯಿಂದಲ್ತು
ಸೈಸಿದುರ್ಧಾದಂ | ಕ್ಷಮೆಯಿಂದಲ್ತುಷ್ಣಶೀತಾದಿಯ ಸಹಿಸಿದುದಾದಂ
ತಪಸ್ಸಿಂದಮಲ್ಲಂ || ಶಮೆವೆತ್ತೆಲ್ಲಾಗಳುಂ ಧ್ಯಾನಿಸಿದುದು ಧನಮೊಂದಲ್ಲ
ದೀಶಾಂಘ್ರಿಯಲ್ತಿ | ನ್ನೆಮಗಾವೌನೀಂದ್ರಕೃತ್ಯಾಚರಣೆಯ ಫಲಮಂ
ವಾಂಛಿಸಲ್ಕೆಂತು ಬಕ್ಕುಂ ||೬||

ವೃ|| ಭೋಗಿಸಿತಿಲ್ಲ ಭೋಗತತಿ ಭೋಗಿಸಿ ಪೋದೆವು ನಾವೆ
ಕಾಲಮೇಂ | ಸಾಗಿದುದಿಲ್ಲ ಸಾಗಿದೆವು ನಾವೆ ತಪಂ ಗಡ ತಪ್ತಮಲ್ತು
ನಾ || ವೇ ಗಡ ತಪ್ತರಾದೆವಳಿಯಾಸೆ ಸುಜೀರ್ಣಮವಾದುದಿಲ್ಲ ಭೂ |
ಭಾಗದೆ ನಾವೆ ಜೀರ್ಣರೆನಿಸಿದ್ದಪೆವಿಂತಿದನಾಗ್ರೆ ಪೇಳ್ವೆವೈ ||೭||

ಕಂ|| ನರೆ ಶಿರವಂ ತೆರೆಮೊಗವಂ |
ನೆರೆ ಮುಸುಕಿ ಶರೀರಮೆಲ್ಲ ಬಡವೆನಿಸಿದೊಡಂ ||
ಅರರೆ ದುರಾಶೆಯದೊಂದೇ |
ತರುಣನ ತೆರದಿಂದೆ ಕುಣಿವುದೇಗೈದಪೆ ನಾಂ ||೮||

ವೃ|| ಕಳೆದುದು ಭೂರಿಭೋಗಗಳ ಭೋಗಿಪ ಕಾಲವುಮೈದಿ
ತಂದಿನ | ಗ್ಗಳದಭಿಮಾನಮುಂ ಮಡಿದರೋರಗೆಯಾದಸುವನ್ನರಾಪ್ತ
ರುಂ || ಜಳೆದುದು ಕಣ್ಗೆ ಕಾವಳಮುಮೇಳ್ವುದುದಂಡದಧೀನಮಾದುದಿಂ |
ತಳಲೊಳಮಂಜುಗುಂ ಮರಣಮೆಂದೊಡೆ ಮೂಢಶರೀರಮದ್ಭುತಂ ||೯||

ವೃ|| ರಾಗಗ್ರಾಹದೆ ಮೋಣ್ ವಿತರ್ಕಖಗದಿಂ ತೃಷ್ಣಾತರಂಗಂ
ಗಳಿಂ | ಭೋಗೇಚ್ಛಾಜಲದಿಂ ವಿಮೋಹಬಹುಳಾವರ್ತಂಗಳಿಂ ತಳ್ತುಧೈ ||
ರ್ಯಾಗಧ್ವಂಸಿನಿಯಾಗಿ ದಾಂಟಲರಿದಾದಾಶಾಸರಿತ್ತಂ ಕರಂ | ಯೋಗೀಂ
ದ್ರರ್ ಗಡ ನಾಡೆ ದಾಂಟಿ ಪರಿಶುದ್ಧಸ್ವಾಂತರಾನಂದಿಪರ್ ||೧೦||

## ವಿಷಯಪರಿತ್ಯಾಗ ಪ್ರಕರಣಂ.

ಕಂ|| ಭಯವಿಾವುದೆನಗೆ ಪುಣ್ಯಾ |
ವ್ಯಯಲಬ್ಧವಿದೆಂದುತಿಳಿದ ಸಂಪದಮಂ ತಾ |
ರಯೆ ಸುಕೃತ ಕಲಿತ ಭೋಗ ನಿ |
ಚಯ ಮನುಭವಿಪರ್ಗೆ ದುಃಖಕಮೆ ಪಿರಿದಕ್ಕು ||೧೧||

ಕಂ|| ವನಿತಾದಿವಿಷಯಮೆನಿತುಂ |
ದಿನಮೆದ್ರೊಡಮಳಿವುದೆಂದದಂ ತಾಮೆ ಬಿಡಲ್ ||
ಜನರ್ಗೆ ಸುಖಮಪ್ಪುದದೆ ತಂ |
ಮನೆ ತೊರೆವಂದಕಟ ಮನಕೆ ದುಃಖಮನೀಗುಂ ||೧೨||

ವೃ|| ಅನುಭವಿಸುತ್ತಮಿರ್ದುಮಹಹಾ ತೊರೆವರ್ ವನಿತಾದಿ
ಭೋಗ ಸಾ | ಧನ ಧನಮಂ ನಿರಾಶತೆಯಿನಾತ್ಮವಿಚಾರರಿದಲ್ತೆ
ದುಷ್ಕರಂ || ಮನದೊಳೆ ಕೂರ್ತುದಲ್ಲದೆ ಕರಂ ಧನಗಂಧಮಕಾಣ
ದಿರ್ದೊಡಂ | ಧನದಳಿಯಾಸೆಯುಂ ತೊರೆಯಲಾರದ ನಾವಕಟೇನ
ಧನ್ಯರೋ ||೧೩||

ವೃ|| ಇಳಿವಾನಂದಾಶ್ರುವಂ ಶಂಕಿಸದೆಡೆಯಣ ಪಕ್ಷಿವ್ರಜಂ ಸೇವಿಸಲ್ ನಿ | ಶ್ಚಳಶಂಭುಧ್ಯಾನದಿಂ ಕಾಲಮನೆ ಕಳೆದಪರ್ ಶೈಲ ದೊಳ್ ಧನ್ಯರಾದಂ|| ಕಳೆಗುಂ ಪ್ರಾಸಾದವಾಪೀತಟವಿಪಿನವಿಹಾರೋತ್ಸ ವಾಶಾವಿಶೇಷಂ | ಗಳಿನಾಯುಷ್ಯಂ ವಲಂ ತಾನೆಮಗೆ ನುಡಿವೆವಾಗ್ಗಾ ವಣಂ ನೋಂತ ಸ್ವೈಪಂ ||೧೪||

ವೃ|| ಸವಿವುದೊ ಸುತ್ತಿಸುತ್ತಿ ತಿರಿತಂದ ಕದನ್ನಮುದುಂ ಗಡೊಂ ದೆಸೂಳ್ | ಪವಡಿಪುದೋ ನೆಲಂ ಪೊದೆವುದೋ ಶತಖಂಡಮನಾಂತ ಕಂಥೆ ಮೇಣ್ || ತವೆ ಪರಿಚರ್ಯೆಗೈವ ಜನಮೋ ತನುಮಾತ್ರ ಮವಸ್ಥೆ ಯಿಂತು ಸಂ | ಭವಿಸಿಯುಮೆಮ್ಮ ನೋವೊ ಬಿಡದಿರ್ದಪುದೀ ವಿಷಯೇಚ್ಛೆಯಕ್ಕಟಾ ||೧೫||

ವೃ|| ತರಸಗ್ರಂಥಿಗಳಂ ಸ್ತನಂಗಳನುದಂಚತ್ಸ್ವರ್ಣಕುಂಭಂ ಗಳಿಂ | ದಿರದಾಶ್ಲೇಷ್ಮದ ಬೀಡೆನಿಪ್ಪ ಮೊಗಮಂ ರಾಕೇಂದುನೀಕಾಶ ಮೆಂ|| ದೊರೆದುಂ ಪೇಸಿಕೆವೆತ್ತ ದುರ್ಜಘನಮಂ ದಂತೀಂದ್ರಶೀರ್ಷಾ ಭಮೆಂ | ದರರೇ ದೊಡ್ಡಿತುಗೆಯ್ದರಲ್ತೆ ಕವಿಗಳ್ ನಿಂದಾರ್ಹಮಂ ರೂಪಮಂ ||೧೬||

ವೃ|| ಅಗಜಾರ್ಧಾಂಗವ ನೀಳ್ದುಕೊಂಡ ಗಿರಿಶಂ ತಾನೋರ್ವ ನೇ ರಾಗಿ ರಾ | ಗಿಗಳೊಳ್ತಾನೆ ವಿರಾಗಿಯುಂ ಬಗೆಯೆ ಕಾಂತಾಸಂಗ ದೂರಂ ಕರಂ || ತೆಗೆ ಕಂದರ್ಪಶಿಳೀಮುಖಾಹಿವಿಷದಗ್ಧರ್ ಮಿಕ್ಕ ಮುಗ್ಧರ್ ವಲಂ | ಮಿಗೆ ಭೋಗಂಗಳ ಭೋಗಿಸಲ್ಕುಮುಳಿಯಲ್ಕುಂ ಶಕ್ತರೇಂ ಲೋಕದೊಳ್ ||೧೭||

ವೃ|| ಸುಡುವುದಿದೆಂದು ಕಾಣದ ಪತಂಗಮುದರ್ಚಿಗೆ ಬೀಳ್ಗೆ ಮಿಾನಮುಂ | ಬಡಿಶದ ಮಾಂಸಮಂ ಸವಿಗೆ ಚುಚ್ಚುಗುಮೆಂಬುದು

ಕಾಣದಕ್ಕಟಾ || ಕೆಡುಕನೆ ಮಾಳ್ಪುವೀ ವಿಷಯಗಳ್ ಕಡೆಗೆಂಬುದ ಕಂಡು ಕೇಳಿಯುಂ | ಬಿಡೆವವನಕ್ಕಟವಿಮ್ಮಯ ವಿಮೋಹ ಮಹತ್ತ್ವವ ನೇನನೆಂಬೆವೈ ||೧೮||

ವೃ|| ಒಣಗಲ್ ಬಾಯ್ ತೃಷೆಯಿಂದೆ ನೀರ್ಗುಡಿವುದಂ ಕ್ಷು ತ್ಪೀಡೆಯುಂಟಾಗಲಂ | ದುಣಿಸಂ ತಾಂ ಸವಿಗೂಡಿ ಭೋಜಿಸುವುದಂ ಕಾಮಾಗ್ನಿ ಕೈವಿಾರೆ ಪೆ || ಣ್ಮಣಿಯಂ ನಲ್ಮೆಯನಾಂತು ತಳ್ಕಿಸು ವುದಂ ತತ್ತದ್ರುಜಾಶಾಂತಿ ಕಾ | ರಣಮಾಗಿರ್ಪ ಚಿಕಿತ್ಸೆಯೆಂದರಿಯ ದಜ್ಞರ್ ಭೋಗವೆಂದಾಡುವರ್ ||೧೯||

ವೃ|| ಹರೆಯಂ ತಾಂ ಪೊಸತಾಲಯಂ ಪಿರಿದು ಮಕ್ಕಳ್ ತಕ್ಕ ರತ್ಯಂತಮೈ | ಸಿರಿ ಸೌಭಾಗ್ಯಮನೋಜ್ಞೆ ಭಾರ್ಯೆ ಗಡಿವೆಲ್ಲಂ ನಿತ್ಯಮೆಂ ದಾವಗಂ || ಮರುಳರ್ ತಾಂ ನೆಲಸಿರ್ಪರಕ್ಕಟ ಮಹಾಸಂಸಾರಕಾರಾ ಗೃಹಾಂ | ತರದೊಳ್ ಧನ್ಯನದೆಲ್ಲಮಸ್ಥಿರಮೆನುತ್ತಂ ಕಂಡವಂ ಮಾಣ್ದಪಂ ||೨೦||

## ಯಾಚ್ಞಾದೈನ್ಯದೂಷಣ ಪ್ರಕರಣಂ.

ವೃ|| ಕಂದಿದ ವಕ್ತ್ರದಿಂ ಪಿಡಿದು ನಾರುಡೆಯಂ ಪಸಿವಿಂದೆ ಮಕ್ಕಳಾ | ಕ್ರಂದಿಸೆ ನೋಡಿ ನೊಂದುಣಿಸನಿಕ್ಕುವೊಡಿಲ್ಲದೆ ಮುಂದೆ ದಂದುಗಂ | ದಂದು ಪುರಂಧ್ರಿ ನಿಂದಿರವ ನೀಕ್ಷಿಸದಿರ್ದೊಡೆ ಧೀರಮಾ ನಸರ್ | ಜೆಂದೊಡಲಿಂಗೆ ಗದ್ಗದಮನೊಂದಿದ ಕಂಠದೆ ದೇಹಿ ಎಂ ಬರೇ ||೨೧||

ವೃ|| ಬಗೆಗಳವಟ್ಟ ಕಟ್ಟಿಸಕದೊಂದಭಿಮಾನದ ಗಂಟ ಭೇದಿ ಪಾ | ಪ್ಪಿಗಸಕಟಾ ತ್ರಪಾತರುಕುಠಾರ ಮನೇಕಗುಣಾಂಬುಜಂ

ಗಳಂ || ಮುಗಿಯಿಪಕನ್ನಜೊನ್ನವಿುದು ದುರ್ಭರಕುಕ್ಷಿಕಟಾಹ ಮಾರ
ಯಲ್ | ನಗೆಗೆಡೆಮಾಡಿ ಕಾಡುಗುಮಶೇಷರನಿಂತಿದನೇನನೆಂದಪೆಂ ||

ವೃ|| ಪೊಡವಿಯ ನಿರ್ಜರರ್ ಬಿಡದೆ ಬೇಳ್ವ ಹುತಾಶನಧೂಮ
ಜಾಲದಿಂ | ದಿಡಿದೆಸೆವಗ್ರಹಾರದೊಳೆ ಮೇಣ್ವನದೊಳ್ತಲೆ ಪೋಡ
ನಾಂತು ಬೆಂ || ದೊಡಲಿಗೆ ಭಿಕ್ಷೆಯಂ ತಿರಿದು ಬಾಳ್ವುದೆ ಮಾನಿಗೆ
ಲೇಸೆನಿಕ್ಕುಮಾ | ಬಡತನವಾಂತು ಬಂಧುಗಳ ಮಧ್ಯದೆ ಕೋಟಲೆ
ಗೊಳ್ವ ಬಾಳಿನಿಂ ||೨೩||

ಕಂ|| ಎಲೆ ಜನರೆ ಮಾನಹಾನಿಗೆ |
ನೆಲೆಯೆನಿಪ ಪರಾನ್ನಕಳುಪುತಳ್ವುದ ನೋಡಲ್ ||
ವಿಲಯಮನೊಂದಿತೊ ಗಂಗಾ |
ಜಲಕಲಿತಂ ಸಿದ್ಧಸೇವಿ ಹಿಮಗಿರಿಕಟಕಂ ||೨೪||

ವೃ|| ಬನದೊಳ್ಪುಟ್ಟವೊ ಕಂದಮೂಲಮವನೀಭೃನ್ನಿರ್ಝರಂ
ಬತ್ತಿತೋ | ತನಿವಣ್ಣಂ ಪೊಸನಾರನೀವ ಧರಣೀಜಾತಂಗಳೇಂ
ಬೀತುವೋ || ಧನಗರ್ವಾನಿಲನಿಂ ಕರಂ ಕುಣಿವ ಪುರ್ವಿಂಬಿಂಕವಾಂ
ತಿರ್ಪುದು | ರ್ಜನರಾಸ್ಯಂಗಳನೇತಕೀಕ್ಷಿಸಿದಪರ್ ದಗ್ಧೋದರಾರ್ಥಂ
ಜನರ್ ||೨೫||

ವೃ|| ವಿನಯಕಲಾವಿದೂರರವಿವೇಕಿಗಳಾಶ್ರಿತವಿತ್ತರೋಗಸಂ |
ಜನಿತವಿಲಾಪರಾದರಸರಾ ಪೆಸರುಂ ಕಿವಿದಾಗದಂತೆವೊಲ್ || ಬನದೊ
ಳಗಿರ್ದು ಪುಣ್ಯಫಲಮೂಲವ ಸೇವಿಸಿ ಪಲ್ಲವಂಗಳಿಂ | ದನುಗತಮಾ
ದಿಳಾತಲದ ತಲ್ಪದೆ ನಿದ್ರಿಪೆವೇಳು ಮಿತ್ರನೇ ||೨೬||

ವೃ|| ಬನಬನದೊಳ್ ಮಹಾದ್ರುಮಫಲಂ ದೊರೆಗುಂ ಶ್ರಮ
ಮಿಲ್ಲದಂತು ಮೇ | ಣಿನಿದೊಳಕೊಂಡ ಪುಣ್ಯತಟನೀಜಲಮಿರ್ಪುದು

ತಾಣತಾಣದೊಳ್ || ತನುಗೊಲವೀವ ಮೆಲ್ದಳಿರ ಶಯ್ಯೆಯುಮಿರ್ದ್ದಪು ದಿನ್ನದೇತಕೀ | ಧನಿಕರ ಬಾಗಿಲೊಳ್ ಬಳಲುತಿರ್ದ್ದಪರಕ್ಕಟ ದೀನ ರಾಶೆಯಿಂ ||೨೭||

ವೃ|| ಧನಿಕರ ಮುಂದೆ ಪಲ್ಗಿರಿದು ಬೇಡುವ ದೀನರದೊಂದು ದುಃಖಮುಂ | ಮನೆಮನೆವಾಳ್ತೆಯಿಂ ಮರುಳುಗೊಂಡಿಹ ಸಂಸೃತಿಬದ್ಧ ರಾರ್ತಿಯುಂ || ನೆನೆನೆನೆದಾನೆ ನಕ್ಕಪೆನಿಳಾಧರಸಾನುಶಿಲಾನಿಷಣ್ಣನಾ | ಗನಿಶಮುಮಾತ್ಮಯೋಗದೊಳಗಿರ್ದ್ದ ಬಹಿರ್ಮುಖನಾದಪೊಳ್ತಿನೊಳ್ ||

ವೃ|| ದೈವಂ ಕೊಟ್ಟುದನುಂಡು ತೃಪ್ತಿವಡುವಗ್ಗಾನಂದವೇಂ ತಪ್ಪಿತಿ | ಲ್ಲೀವೇಳ್ವೆಂ ಧನಲೋಭದಿಂ ಕುದಿವರಾಶಾಪೂರ್ತಿಯೇನಾ ದುದಿ || ಲ್ಲಾವಂಗಾಗಿದ ಗೈದನೋ ವಿಧಿ ಪರಾರ್ಥಕ್ಕೈದದಾತ್ಮೀಯಸಂ ಭಾವಶ್ರೀಕಮೆನಿಪ್ಪ ಮೇರುವ ನಿದಂ ನೋಳ್ಪೊಪ್ಪದೆನ್ನೀಮನಂ ||೨೯||

ವೃ|| ಕ್ಲೇಶವಿನಾಶಿಯೆಂದು ಮದಮತ್ಸರಮರ್ದನಮೆಂದುಸತ್ಸು ಖಾ | ವೇಶಕಮೆಂದು ಭೀತಿಹರಮೆಂದುಮಜಸ್ರಮಯತ್ನಲಭ್ಯಮೆಂ || ದೀಶನ ಸತ್ರಮೆಂದಳಿಯದಿರ್ಪ್ಪ ನಿಧಾನಮುಮಿಂತಿದೆಂದು ಭಿ | ಕ್ಷಾಶ ನಮಂ ಕರಂ ಪೊಗಳ್ವರೊಲ್ದು ಮುಮುಕ್ಷುಗಳಪ್ಪ ಯೋಗಿಗಳ್ ||೩೦||

## ಭೋಗಾಸ್ಥಿರತ್ವವರ್ಣನ ಪ್ರಕರಣಂ.

ವೃ|| ಬಲದೊಳರಾತಿಭೀತಿ ಕುಲದೊಳ್ಚ್ಯುತಿಭೀತಿ ಜರಾತಿಭೀತಿ ರೂ | ಪೊಳೆ ನೃಪಭೀತಿ ವಿತ್ತದೊಳೆ ಭೋಗದೆ ರೋಗದಭೀತಿ ನೀತಿ ಯೊಳ್ || ಖಲಜನಭೀತಿ ಮಾನದೊಳೆ ದೈನ್ಯದ ಭೀತಿ ಕೃತಾಂತಭೀತಿ ಮೆ | ಯ್ಯೊಳೆ ಪರವಾದಿಭೀತಿ ಕಲೆಯೊಳ್ ಸುವಿರಕ್ತಿಯದೊಂದೆ ನಿರ್ಭ ಯಂ ||೩೧||

ವೃ|| ಮರಣದೆ ಜನ್ಮಮಾಜರೆಯಿನೊಪ್ಪುವ ಜೌವನಮರ್ಥ ಕಾಂಕ್ಷೆಯಿಂ | ಹರುಸಮದಂಗನಾಜನದ ವಿಭ್ರಮದಿಂ ಶಮೆ ದುಷ್ಟರಿಂ ನೃಪರ್ || ಉರಗದೆ ಚಂದನಂ ಗುಣಮಸೂಯಿಗಳಿಂ ಸಿರಿಯಸ್ಥಿರತ್ವ ದಿಂ | ಪರಿಗತಮಾದುದಾಕ್ರಮಿಸದಾವುದುಮಾವುದರಿಂಧರಿತ್ರಿಯೊಳ್ ||

ವೃ|| ಜನದಾರೋಗ್ಯವ ಮಾಣಿಕುಂ ಪಿರಿದುಮಾಧಿವ್ಯಾಧಿಗಳ್ ಸಂಪದಂ | ಘನಮಾಗಿರ್ಪೆಡೆಯಲ್ಲನರ್ಗ್ಗಳಮೆನಲ್ ಬೀಳ್ಗುಂ ಸಮಂ ತಾಪದಂ || ಜನನಂ ಪೊರ್ದ್ದಿದ ಜಂತುವಂ ಬಿಡದೆ ಕೊಳ್ಗುಂತಪ್ಪದಾ ಮೃತ್ಯುಗ | ಳ್ಕನೆತಾಂ ನೋಡೆ ನಿರಂಕುಶಂ ವಿಧಿಯದೇನಂ ಸುಸ್ಥಿರಂ ಮಾಡಿದಂ ||೩೩||

ವೃ|| ಸ್ಥಿರಮಲ್ಲಂ ಜೀವಿತಂ ಭೋಗಮೊ ತರಳತರಂ ಗೋಪಮಂ ಯೌವನಶ್ರೀ | ಭರಮೋ ಮೂರೇ ದಿನಂ ಕಾದಲೆಚಲೆತೆಗೆ ಸಂಸಾರಮೋ ಸಾರಮಲ್ಲಂ || ತರಿನೆಂದಾರಯ್ದು ತತ್ತ್ವಾರ್ಥವ ಬುಧರೆ ಜನಾನುಗ್ರಹ ಕ್ಕಾತ್ಮಚಿಂತಾ | ಪರರಾಗಿಂ ಶ್ರೀಸ್ಮರೇಗೆಯ್ದ ಪರದನೆ ಜನರ್ ಶ್ರದ್ಧೆಯಿಂ ಮಾಳ್ಪರಲ್ತೇ ||೩೪||

ವೃ|| ಪಲವಗೆಯಾದ ಭೋಗತತಿ ಮೇಘದೆ ಮಿಂಚುವ ಮಿಂಚಿ ನಂತೆ ಚಂ | ಚಲತರಮಾಯು ವಾಯುನಿಹತಾಬ್ಜದಳೋದಕದಂತೆ ಭಂಗುರಂ || ವಿಲಸಿತಯೌವನೋತ್ಸವಮುಮಸ್ಥಿರಮೆಂದು ಮರಲ್ಚಿ ಚಿತ್ತಮಂ | ಚಲಿಸದಣಂ ಸಮಾಧಿಯೊಳೆ ಸಂದು ಸೊಗಂಬಡೆಯಿಂ ವಿವೇಕಿಗಳ್ ||

ವೃ|| ಸಿರಿ ಸಂಕಲ್ಪಕೆ ಸಾಟಿ ಯೌವನಭರಂ ಮೂರೇದಿನಂ ವೀಚಿಯುಂ | ತಿರೆ ತಾಂ ಚಂಚಲಮಾಯು ಕಾರ್ಮುಗಿಲ ಮಿಂಚಂ ಪೋಲ್ಪುವೀ ಭೋಗಗಳ್ || ಸ್ಥಿರಮಲ್ಲಂ ದಯಿತಾಜನೋಪಗತಕಂಠಾ ಲಿಂಗನಾನಂದಮುಂ | ಭರದಿಂ ದಾಂಟಿ ಭವಾಬ್ಧಿಯಂ ನೆಲಸಿರ್ಕೆ ಬ್ರಹ್ಮಾನುಸಂಧಾನದೊಳ್ ||೩೬||

ವೃ|| ಜನನಿಯ ಪೂತಿಗಂಧಮಯಗರ್ಭದೆ ವೈಯ್ಯುಡುಗಿರ್ಪ ಬಾಧೆ ಯೌ | ವನದೊಳಗಂಗನಾವಿರಹದುಃಖಮನುಂಬುದದೊಂದು ಬಾಧೆಮು || ಪ್ಪಿನೊಳೆ ವಧೂಟಿಯುರ್ಕ್ಕಳಿದಿರೊಳ್ನಗೆಗೀಡೆನಿಸಿರ್ಪ ಬಾಧೆ ದಲ್ | ಮನುಜರೆ ಪೇಳಿಮೆಳ್ಳನಿತು ಸಂಸೃತಿಯೊಳ್ ಸುಖಮಿರ್ದ್ದೊಡಿನ್ನದಂ ||೩೭||

ಕಂ|| ನಡುಗಿಕುಮುದೆ ಜರೆ ಪುಲಿಯವೊ |
ಲೊಡಲಂ ರುಜೆಪೊಡೆವುದರಿವೊಲಾಯುವದೊಸರ್ಗುಂ ||
ಒಡೆದ ಘಟದುದಕದಂತಾ |
ದೊಡಮಹಿತಂ ಮಾಳ್ಪರೆಂಬುದಚ್ಚರಿ ಮನುಜರ್ ||೩೮||

ವೃ|| ವಿವಿಧಮೆನಿಪ್ಪ ಭೋಗಕುಲಮಸ್ಥಿರಮಂತದನುಣ್ಬುದಕ್ಕಮೇ | ಭವಮಿದು ಬಂದುದಿನ್ನಿದಕದೇಕೆ ತೊಳಲ್ವಿರಿ ತಾನೆ ಊಡುಗುಂ || ನಿವಗಿರಲೆಮ್ಮ ಮಾತಿನೊಳೆ ನಂಬಿಕೆ ದುರ್ವಿಷಯಾಭಿಲಾಷೆಯಂ | ತವೆ ಪರಿದಿಕ್ಕಿ ಮಾನಸಮನಾತ್ಮನೊಳೊಂದಿಪುದೈ ಸುಬುದ್ಧಿಗಳ್ ||೩೯||

ವೃ|| ಆವೆಡೆ ನಿಂದೊಡಂಬುಜಭವಾದಿಗಳುಂ ತೃಣಕಲ್ಪರಾದಪರ್ | ಸೇವಿಸಲಾವುದಂ ತ್ರಿಭುವನೇಶತೆಯುಂ ವಿರಸಂದಲಪ್ಪುದಾ || ಪಾವನಭೋಗದೊಳ್ ರಮಿಸು ನೀನೆಲೆ ಸಾಧುವೆ ಸಾಕು ಮಿಕ್ಕಭೋಃ | ಗಾವಳಿಯೆಲ್ಲಮಸ್ಥಿರಮಿದಂ ಸಲೆ ಕಾಂಕ್ಷಿಸಬೇಡ ಚಿತ್ತದೊಳ್ ||೪೦||

## ಕಾಲಮಹಿಮಾನುವರ್ಣನಂ.

ವೃ|| ಆರಮಣೀಯಪತ್ತನಮುಮಾನೃಪಶೇಖರನಾವಿನಪ್ರಭೂ| ಮಾರಮಣರ್ಕ್ಕಳಾ ವರಸಭಾಸದರಾ ಶಶಿಬಿಂಬವಕ್ತ್ರೆಯರ್ || ಆರುಚಿ

ರಾಂಗರಾಜಸುತರಾ ವಿಭವಂಗಳವೆಲ್ಲಮೇತರಿಂ | ಸೇರಿದುವಕ್ಕಟಾ ನೆನೆಪುವಟ್ಟಿಯುವಂದಿಪುದಾಸುಕಾಲಮುಂ ||೪೧||

ವೃ|| ಪಲರಿರುತಿರ್ಪ್ಪ ಮಂದಿರದೊಳಿರ್ದ್ದಪನೋರ್ವನೆ ಯೋರ್ವನಿರ್ಪ್ಪತ | ನ್ನಿಲಯದೊಳಿರ್ದ್ದಪರ್ ಪಲಬರಂತ್ಯದೊಳೋರ್ವನುಮಿಲ್ಲಮಿಂತು ಚಂ || ಚಲತರರಪ್ಪ ಜೀವರನೆ ಕಾಯ್ದ್ಗಳನಾಗಿಸುತಾಡುವಂ ಧರಾಫ | ಲಕದೆ ಧೀರಕಾಲವಿಭು ಚಿಮ್ಮುತಿರುಳ್ವಗಲೆಂಬನೆತ್ತಮುಂ ||೪೨||

ವೃ|| ಅನುದಿನಮಾಯು ತಾಂ ಸವೆವುದೀಯುದಯಾಸ್ತಮಯಂಗಳತ್ತಣಿಂ | ಮನೆಮನೆವಾಳ್ತೆಯಿಂ ಕಳೆವ ಕಾಲಮುಮಕ್ಕಟ ಕಾಣದಿರ್ಕ್ಕುವಿಾ || ಜನದ ಜರಾವಿಪತ್ತಿಮರಣಂಗಳ ಕಂಡೊಡಮೇಕೆ ಭೀತಿಸಂ | ಜನಿಯಿಸದೋವೊ ಮೋಹಮಧುಮೀಂಟಿ ಜಗಂ ಮರುಳಾಯ್ತು ನಿಕ್ಕುವಂ ||೪೩||

ವೃ|| ಇರುಳಿದು ಪೋದಿರುಳ್ಗೆ ಸರಿ ಯಿಾಪಗಲಾಪಗಲಿಂಗೆ ಸಾಟಿಯೆಂ | ದಿರದೊಡನುಜ್ಜುಗಂಬಡುತಮುಂಡುದನುಂಡು ನಿರೀಕ್ಷಿಸಿದ್ದುದಂ || ನಿರುಕಿಸಿ ಭೋಗಿಸಿದ್ದುದನೆ ಭೋಗಿಸಿ ಗೆಯ್ದುದಗೆಯ್ದು ಮೋವೊ ಬೇ | ಸರಿಸಿದುದಿಲ್ಲ ಸಂಸೃತಿಯೊಳೆಮ್ಮ ವಿಮೋಹಕದೇನನೆಂಬೆವೈ ||೪೪||

ವೃ|| ಸ್ಮರಿಸಿದುದಿಲ್ಲ ಶಂಭುಪದಮುಂ ಭವಮುಕ್ತಿಗೆ ಭಕ್ತಿವೆತ್ತುಮೇಣ್ | ಸುರನಗರೀಕವಾಟಹರಧರ್ಮಮುಮಾರ್ಜನೆಗೆಯ್ದುದಿಲ್ಲಮೇಣ್ || ಗುರುಕುಚೆಯರ್ಕ್ಕಳುಂ ಕನಸಿನಲ್ಲಿಯುಮಪ್ಪಿದರೆಂಬುದಿಲ್ಲವೀ | ಧರೆಯೊಳೆ ಪುಟ್ಟಿ ಪೆತ್ತಳುರುಯೌವನಮುಂ ಬರಿಗೆಯ್ದೆವಕ್ಕಟಾ ||

ವೃ|| ಓದಿದುದಿಲ್ಲ ವಾದಿಜಯವಿದ್ಯೆಯುಮುನ್ಮದಕುಂಭಿಕುಂಭನಿ| ರ್ಭೇದನಖಡ್ಗದಿಂ ಯಶಮುಮೈದಿಸಿತಿಲ್ಲ ದಿವಕ್ಕೆ ಚಾರುಚಂ || ದ್ರೋದಯದಲ್ಲಿ ಕಾಂತೆಯಧರಾಮೃತಮುಂ ನೆರೆಪೀರಿತಿಲ್ಲವೋ | ಪೋದುದು ಯೌವನಂ ಬರಿದೆ ಪಾಳ್ಮನೆಗೆತ್ತಿದ ದೀಪದಂತೆವೋಲ್ ||೪೬||

ವೃ|| ಕಲೆಯುಮನಾದೊಡಂ ಕಲಿತನಲ್ತು ಸಮಗ್ರಮದಾಗೆ ಪೊನ್ನುಮಂ | ಗಳಿಸಿದನಲ್ತು ಮಾತೃಪಿತೃಸೇವೆಯುಮಂ ನೆರೆಗೆಯ್ದನಲ್ತು ಮೇಣ್ || ಲಲನೆಯುರಂ ಕರಂ ಕನಸಿನಲ್ಲಿಯು ಮಪ್ಪಿದನಲ್ತು ಕಾಲಮಂ | ಕಳೆದೆನೆ ವಾಯಸಂಬೊಲಕಟಾ ಪರಪಿಂಡವಿಲೋಲುಪತ್ವದಿಂ ||೪೭||

ಕಂ|| ಅಳಿದರ್ ಪೆತ್ತವರುಂ ಮೇಣ್ |
ಬಳೆಯಿಸಿದರುಮೆಮ್ಮವಸ್ಥೆಯುಂ ತಾನೀಗಳ್ ||
ಮಳಲಳುರ್ದ ಪೊಳೆಯತಡಿಯೊಳ್ |
ಬೆಳೆದ ಮರಂಗಳ್ಗೆ ಸಾಟಿಯೆಂದೆನಿಸಿರ್ಕುಂ ||೪೮||

ವೃ|| ಶತವರ್ಷಂ ಜನಕಾಯುವಂತದರೊಳರ್ಧಂ ರಾತ್ರಿಯೊಳ್ ಪೋಯ್ತು ಬಾ | ಲತೆಯೊಳ್ವೃದ್ಧತೆಯೊಳ್ತದರ್ಧದೊಳಗರ್ಧಂ ಪೋಯ್ತು ಮಿಕ್ಕಾಯುವುಂ || ಗತಮಕ್ಕುಂ ಗಡ ರೋಗಬಂಧುವಿರಹಕ್ಲೇಶಾಢ್ಯಸೇವಾದಿಯಿಂ | ದತಿಚಾಂಚಲ್ಯದ ಬಾಳೊಳೆತ್ತಣೆಸಣಂ ಜೀವರ್ಗೆ ಸೌಖ್ಯಂ ವಲಂ ||೪೯||

ವೃ|| ಎಣಿಸಲ್ ಸಂಸಾರಮೇ ನಾಟಕಮದರೊಳಗೀ ಮಾನವಂ ತಾಂ ನಟಂಬೊಲ್ | ಕ್ಷಣದೊಳ್ ಬಾಲಂ ಕ್ಷಣಂ ಜೌವನಿಗನತಿಮದಾಢ್ಯಂ ಕ್ಷಣಂ ವಿತ್ತಹೀನಂ || ಕ್ಷಣಮೈಶ್ವರ್ಯಪ್ರಪೂರ್ಣಂ ಕ್ಷಣಮಹಹ ಜರಾಜೀರ್ಣನಾಗಂತ್ಯದೊಳ್ ಸಂ | ದಣಿಮಾಣ್ದು ಕಾಲನೂರೆಂದೆನಿಪ ತೆರೆಯೊಳಂತೈದುವಂ ಪೇಳ್ವೆವೇನಂ ||೫೦||

## ಯತಿನೃಪತಿಸಂವಾದವರ್ಣನೆ.

ವೃ|| ಘೋರೆನೀನಾವು ಮುಪಾಸಿತಾವಳಿಗುರು ಪ್ರಜ್ಞಾಭಿಮಾನಂ
ಗಳಿಂ| ದೊರೆವೆತ್ತರ್ ಸಿರಿಯಿಂ ನೆಗಳ್ತೆನಿನಗೆಮ್ಮಂನರ್ಗೆ ಸದ್ವಿದ್ಯೆಯಿಂ||
ಕರವಿಾವರ್ಗೆಮಗಂತರಂ ಪಿರಿದುದೂರಂ ಜ್ಞಾನವಿತ್ತಂಗಳಿಂ | ದೊರ
ದೇನೆಂವೊಳುಪೇಕ್ಷೆಗೈದ ಪೊಡನೀವಾವುಂವಲಂ ನಿಸ್ಪೃಹರ್ ||೫೧||

ವೃ|| ಅರಸಾ ನೀನರ್ಥಕಾಣ್ಮಂ ಪರಕಿಸುವೊಡೆ ವಾಗರ್ಥಕಾಣ್ಮ
ರ್ಕಳಾವಾ | ಅರಿಯಂ ಗೆಲ್ವಾಪ್ಪುರ್ ನಿನ್ನಲ್ಲಿರೆ ಯೆಮಗಿದೆದಲ್ ವಾದಿ
ಯಂಗೆಲ್ವ ಶೌರ್ಯಂ || ಸಿರಿಗೋಲ್ಕೈಪರ್ ಜನರ್ ನಿನ್ನನೆ ತಿಳಿವಿಕೆ
ಗೋಲ್ಕೈಪರೆಮ್ಮಂಗಡೀರ್ವರ್ | ಸರಿ ನೀನೆಮ್ಮೊಳುಪೇಕ್ಷಾಪರನೆನಿಸೆ
ಕರಂ ನಿನ್ನೊಳಾವುಂ ನಿರಾಶರ್ ||೫೨||

ವೃ|| ಜನಪತಿ ಪರಿತುಷ್ಟರ್ ವಲ್ಕದಿಂದಾವು ನೀನುಂ |
ಕನಕವಸನದಿಂದಂ ತುಷ್ಟನಿನ್ನೇಂ ವಿಶೇಷಂ ||
ಮನದೊಳೆ ಪರಿತೋಷಂದಾಳದಂತಾಂದರಿದ್ರಂ |
ಮನಕಿರೆ ಪರಿತೋಷಂ ದೀನರಾರಾಧ್ಯನಾವಂ ||೫೩||

ಕಂ|| ಫಲಮುಂಟುಂಬೊಡೆ ಕುಡಿವೊಡೆ |
ಜಲಮುಂಟೆಳೆಪಡುವೊಡುಂಟು ಪೊದೆವೊಡೆ ತರುವ ||
ಲ್ಕಲಮುಂಟು ಸೈಪುದೇಕಿ |
ನ್ನಿಳೆಯೊಳ್ ಧನಮದ್ಯಮತ್ತಜನಪರ ಸೊರ್ಕಂ ||೫೪||

ಕಂ|| ಉಂಬೆವು ಭಿಕ್ಷಾನ್ನವನೆ ದಿ |
ಗಂಬರರಾಗಿಪ್ಪೆವೊಲ್ದು ದ್ರಿಪೆವಿಳೆಯೊಳ್ ||
ಕುಂಬಿಣಿಯರಸರ ಸೇವಿಪ |
ಹಂಬಲವಿನ್ನೇತಕೆಮಗೆ ಪೇಳ್ಕೈ ಮಿತ್ರಾ ||೫೫||

ಕಂ|| ನಟರಲ್ಲಂ ವಿಟರಲ್ಲಂ |
ಘಟಕುಚಭಾರದೊಳೆ ಬಾಗಿದಸಿಯರುಮಲ್ಲಂ ||
ಕುಟಿಲವಚೋವಿದರಲ್ಲಂ |
ಘಟಿಪುದದೆಂತೆಮಗೆ ದರ್ಶನಂ ಧರಣಿಪನಾ ||೫೬||

ವೃ|| ನೆಲನಂ ಸ್ಥಾಪಿಸಿದರ್ ಮಹಾಪೃಥುಹರಿಶ್ಚಂದ್ರಾದಿಗಳ್ತಾ ಮದಂ | ಬಲುಹಿಂದಾಳಿದರಾ ಯಯಾತಿಮುಖಭೂಪರ್ ಮೇಣದಂ ಕೊಟ್ಟರಾ || ಬಲಿಮುಖ್ಯರ್ ತೃಣವೆಂದದಿರ್ಕೆ ಪಲರೀಗೀರೇಳುಲೋಕಂಗಳಂ | ಸಲಪುತ್ತಿರ್ದ್ದಪರೇಕೆ ಬೀಗುವರೊ ನಾಲೂರಾಳ್ಕಿಗೀ ದುರ್ನೃಪರ್ ||೫೭||

ವೃ|| ಎಡೆದೆರಪಿಲ್ಲದಂತು ಪಲಬರ್ ಧರಣೀರಮಣರ್ಕ್ಕಳಾಳಿದೀ | ಪೊಡವಿಯಲಾಭದಿಂದೆ ಬಹುಮಾನಮದೇ ನರಸರ್ಗ್ಗದಿರ್ಕ್ಕೆಯಾ|| ಪೊಡವಿಯೊಳೊಂದುಭಾಗಮದರೊಂದೆಡೆಯಂತದರೊಂದುಮೂಲೆಗಾ | ಪೊಡೆಯರೆನಿಪ್ಪೆವೆಂದಳಲದೇತಕೆ ಬೀಗುವರೋವೊ ಗಾವಿಲರ್ ||೫೮||

ವೃ|| ಎಣಿಸಲ್ಕೀ ನೆಲನಂಬುಸಂವಳಿತಮೃತ್ಪಿಂಡಂ ಗಡಾ ತಾನದಂ || ರಣದಿಂ ಸ್ವಾಂಶಮಗೆಯ್ದು ಭೋಗಿಪರಸರ್ ತಾಮೇ ದರಿದ್ರರ್ವಲಂ || ಪಣಮಂ ಕೊಟ್ಟಪರೇನವರ್ಕ್ಕುಡುವರೇಂ ಪೋವಿತ್ತಲೇಶಕ್ಕೆಬಾಯ್ | ದಣಿವಂತರ್ಥಿಪರಕ್ಕಟಾ ಅವರುಮಂ ಛೀಛೀ ಮನುಷ್ಯಾಧಮರ್ ||೫೯||

ವೃ|| ಹರಶೀರ್ಷಾಗ್ರಕೆ ಸಂದುದಾವನ ಕಪಾಲಂ ಭೂಷಣಾರ್ಥಂ ಮಹೀ | ವರನಾತಂ ನೃಪಚಂದ್ರನಾರಯೆ ಕೆಲಂಬರ್ ತಮ್ಮ ದಗ್ಧೋದರಂ || ಬೊರೆಯಲ್ಕುಂಬಿಡೆ ಬೀಗಿ ಬಿಸ್ರನೆ ಜಗಕ್ಕಾವೇ ನರೇಂ

ದ್ರೆರ್ಕ್ಗಳಿಂ | ದರರೇ ತಳ್ತ ಮಹಾಮದಜ್ವರದಿನೇಕೀ ದುರ್ನೃಪರ್
ಬೆಂದಪರ್ ||೬೦||

## ಮನಸ್ಸಂಬೋಧನ ನಿಯಮನ ಪ್ರಕರಣಂ.

ವೃ|| ಪರರ ಮನವನೇಕಾಯಾಸದಿಂದಂ ಪ್ರಸನ್ನೀ |
ಕರಿಸಲಳಲುವೈ ನೀನಾದೊಡಂತಃಪ್ರಸನ್ನಂ ||
ಸುರಮಣಿಗಣರೂಪಂ ಸಾರಸಂಕಲ್ಪಮಾದಂ |
ನೆರೆಪದೆ ನಿಜವಾಂಛಾಸಿದ್ಧಿಯಂ ಚಿತ್ತಮೇ ಪೇಳ್ ||೬೧||

ಕಂ|| ಪಲವೆಡೆ ತೊಳಲಿದೊಡಕಟಾ !
ಫಲಮೇಂ ಸಂತಮಿರುಮನವೆ ಬಪ್ಪುದೆ ಬರ್ಕುಂ ||
ಸಲೆ ಭೂತಭಾವಿಗಳ ಹಂ |
ಬಲಿಸದೆ ದೊರೆದುದನೆ ಸುಖದೊಳನುಭವಿಸಿದಪೆಂ ||೬೨||

ವೃ|| ಆಯುಸವಿಾವ ದುರ್ವಿಷಯಕಾನನಕೈದದೆ ಚಿತ್ತಮೇ ಕರಂ | ಶ್ರೇಯಮನೀವ ಸಾಧುಪಥದೊಳ್ ನಡೆ ಪೋದಪುದೆಲ್ಲದುಃಖ ಮುಂ | ಹೇಯಮೆನಿಪ್ಪ ಸಂಸೃತಿಯೊಳಾಸೆಯನಾಂಪುದರಿಂದಮೇನೊ ನಿ | ಶ್ರೇಯಸಸೌಖ್ಯಮಂ ಪಡೆಯ ನಿಶ್ಚಲನಾಗಿ ನಿಜಾತ್ಮಯೋಗ ದೊಳ್ ||೬೩||

ವೃ|| ಮೋಹವ ವರ್ಜಿಸಾರ್ಜಿಸು ಸುಧಾಕರಶೇಖರಭಕ್ತಿಯಂ ಮರು | ದ್ವಾಹಿನಿಯಿರ್ಪ್ಪ ದೇಶದೆ ನಿವಾಸಿಸು ಚಿತ್ತಮೆ ನಂಬಲಕ್ಕು ಮೇ || ನೂಹಿಸೆ ವೀಚಿಯುಂ ಸಲಿಲಬುದ್ಬುದಮುಂ ಫಣಿಬೃಂದಮುಂ ತಟಿ | ದ್ವ್ಯೂಹಮನಂಗನಾಜನಮನು ಜ್ವಲದಗ್ನಿಶಿಖಾಕಲಾಪಮಂ ||

ವೃ|| ಸಿರಿ ಭೂಪಭ್ರುಕುಟೀಕುಟೀರದೆ ವಿಹಾರಂ ಮಾಡುವಾ ವಾರಸುಂ | ದರಿ ತಾನಾಕೆಯ ಚಿಂತೆಬೇಡ ಮನಮೇ ನಿಲ್ಲಲ್ಗಡಾರ ಣ್ಯಿಯುಂ || ವರವಾರಾಣಸಿಗೆಯ್ದಿ ಕಂತೆದಳೆದಾ ಆಮಂದಿರಪ್ರಾಂತದೊ ಳ್ | ಚರಿಸುತ್ತಂ ಕರಪಾತ್ರಭಿಕ್ಷೆಯನೊರಲ್ದಾಸ್ವಾದಿಸಲ್ಕರ್ಥಿಪೆಂ ||

ವೃ|| ಇದಿರೋಳಿಂಪಾಂತ ಗಾನಂ ಕೆಲದೆ ಕವಿವರರ್ ದಾಕ್ಷಿ ಣರ್ ಪಿಂತೆ ಕಂತೂ | ನ್ಮದಚಂಚಚ್ಚಾಮರಗ್ರಾಹಿಣಿಯರ ವಲಯಾ ರಾವಮಿಂತಿರ್ದೊಡಾನಂ || ದದೆ ನೀಂ ಸಂಸಾರಸಾರಾಮೃತವ ಸವಿ ಕರಂ ಚಿತ್ತಮೇ ಮತ್ತಮಂತ | ಲ್ಲದೊಡೀ ಸಂಸಾರದಿಂದೇಂ ಕಳೆ ತಳೆ ಪರಮಾತ್ಮಾನುಸಂಧಾನದೊಳ್ಪಂ ||೬೬||

ಕಂ|| ಅರಿಗಳ ತಲೆಮೆಟ್ಟಿದೊಡೇಂ |
ಸಿರಿಯಂ ಗಳಿಸೇನೊಪಿರಿದವಟರನೊಲಿಸೇಂ ||
ಇರಲೇನಾಕಲ್ಪಾಂತಂ |
ಬರ ಮರಿವಂ ಪಡೆಯದಿರ್ಪ ಮನುಜರ್ ಧರೆಯೊಳ್ ||೬೭||

ಕಂ|| ಹರನೊಳಿಡು ಭಕ್ತಿಯಂ ಜನಿ |
ಮರಣಂಗಳಗಂಜು ತೊರೆ ಸತೀಸುತರೊಳ್ಕ ||
ಟ್ಟಿರಕವನಮಲವಿರಕ್ತಿಯ |
ಧರಿಸು ಕರಂ ನೆಲಸು ವಿಜನವೆನಿಸಿದ ವನದೊಳ್ ||೬೮||

ಕಂ|| ಬಳಿಕೆ ಜರಾಂತಗಳಿಲ್ಲದೆ |
ತೊಳಪಾತ್ಮನ ನೆನೆಯಸದ್ವಿಕಲ್ಪಂಗಳನೇಂ ||
ಫಳಮಾತ್ಮಸಂಗಿಗೇತಕೆ |
ತಿಳಿವಿಲ್ಲದರೆಳಸುವಿಂದ್ರಪದಮುಖಭೋಗಂ ||೬೯||

ಕಂ|| ಪುಗುವೆ ರಸಾತಳಕಲ್ಲಿಂ |
ನೆಗೆವೆ ವಿಯತ್ತಳಕೆ ಚರಿಪೆ ದೆಸೆಗಳೊಳೆಲ್ಲಂ ||
ತೆಗೆ ಚಿತ್ತಮೆ ಮರೆದುಂ ನೀಂ |
ಸೊಗವೀವ ಪರಮಾತ್ಮಚಿಂತೆಗೆಳಸೆಯದೇಕೈ ||೭೦||

## ನಿತ್ಯಾನಿತ್ಯವಸ್ತುವಿಚಾರ ಪ್ರಕರಣಂ.

ವೃ|| ನಿಗಮಪುರಾಣಶಾಸ್ತ್ರಪಠನಂಗಳಿನೇನಮರಾವತೀಪುರ | ಪ್ರಗತಕುಟೀರವಾಸಫಲವೀವ ಮುಖಂಗಳನೆಲ್ಲ ಮಾಡಲೇಂ || ಜಗದೆ ಭವಾರ್ತಿಹಾರಿಪರಮಾತ್ಮಸುಖಾನುಭವಾಮಳಸ್ಥಳಂ | ಬುಗುವುದನೊಂದಮಾಣ್ದು ಳಿದ ವರ್ತಕವೃತ್ತಿಗಳಿಂದಮೇಂ ಫಲಂ ||೭೧||

ವೃ|| ಸಿರಿಗೆಡೆಯಾದ ಮೇರುಗಿರಿಯುಂ ವಿಲಯಾಗ್ನಿಶಿಖಾಕಲಾಪದಿಂ | ದುರಿಗುಮುದಗ್ರಮಾದ ಮಕರಾಲಯಮುಂ ಗಡ ನಾಡೆ ಬತ್ತುಗುಂ || ಧರಣಿಯುಗೇಂದ್ರಪಾದಧೃತಮಾದೊಡಮಾಂಪುದೆನಲ್ಕೆ ನಾಶಮಂ | ಕರಿಗಳ ಕರ್ಣದಂತೆ ಚಲಮಾದೊಡಲಂಗಮನೇನನೆಂದಪೆಂ ||೭೨||

ವೃ|| ಒಡಲೆಲ್ಲಂ ಕುಗ್ಗಿಪೋದತ್ತುಡುಗಿತು ನಡೆ ಮೇಣ್ಪಲ್ಗಳುಂ ಬೀಳ್ದುವಾಸ್ಯಂ | ಕಡೆವಾಯಿಂ ಸೋರ್ವ ಜೊಲ್ಲಿಂದಿಡಿದುದು ಕಿವಿಯುಂ ಕೇಳದಾದತ್ತು ಕಣ್ಣುಂ || ನಡೆ ನೋಡಲ್ಕಾಣದಾಯ್ತಾದರಿಸರೊರೆದುದಂ ನಂಟರುಂ ಭಾರ್ಯೆಯುಂ ತಾಂ | ಕಡೆಗಾಣ್ಬಳ್ ಪೇಳ್ವುದೇಂ ಮುಪ್ಪಡಸಿದೊಡಕಟಾ ಪುತ್ರನುಂ ಶತ್ರುವಪ್ಪಂ ||೭೩||

ವೃ|| ನರೆತ ಶಿರದಿಂದಸ್ಥಿಪ್ರಾತಂಪೊದಳ್ದ ಶರೀರದಿಂ | ವಿರಸಮುಖದಿಂ ತೋರುತ್ತಿರ್ಪ್ಪಜರಾಪರಿಭೂತನು || ತರುಣಿಯುರಣಂ

ಕಂಡಃಚಂಡಾಲವಾಟಿಯ ಕೂಪದಾ | ತೆರದೆ ತೊರೆದೈತರ್ಪ್ಪರ್ ನೈ
ಜಾಂತರಂಗದೆ ಪೇಸುತಂ ||೭೪||

ವೃ|| ತನುವಿದು ರೋಗದಿಂ ಮುಸುಕದನ್ನಮೆ ಮುಪ್ಪದು ಪೊರ್ದ್ದದನ್ನಮೇ | ಘನಮೆನಿಸಿಂದ್ರಿಯಾಳಿ ಕಿಡದನ್ನಮೆ ಮಿಳ್ತಿಡೆ ಪೊರ್ದ್ದದನ್ನಮೇ || ತನಗೆ ವಿಮುಕ್ತಿಯುಪ್ಪದರೊಳುಜ್ಜುಗಿಪಾತನೆ ಬಲ್ಲವಂ ಗಡಾ | ಮನೆಗುರಿಪತ್ತಿದಂದಕಟ ಬಾವಿಯ ತೋಡಿದರುಂಟೆ ಲೋಕದೊಳ್ ||೭೫||

ವೃ|| ತಪಮಂ ಗೆಯ್ಯುತೆ ಗಾಂಗತೀರದೆ ನಿವಾಸಂಮಾಳ್ಪೆವೋ ಮೇಣ್ಗುಣಾ | ಢ್ಯಪುರಂಧ್ರೀಜನಮಂ ಸೊಗಂಬಡಿಪೆವೋ ಶಾಸ್ತ್ರೌಘಮಂ ಮೇಣ್ಮನೋ || ಜ್ಞಪದಶ್ರಾವ್ಯಸುಕಾವ್ಯದಿವ್ಯಸುಧೆಯಂ ಸಂಸ್ವಾದನಂಗೆಯ್ವೆವೋ | ವಿಪುಲಾಭಾಗದೆ ಮಾಳ್ಪೆವಾವುದುಮನೀಯತ್ಯಲ್ಪವಾದಾಯುವೊಳ್ ||೭೬||

ವೃ|| ಅರಿದೊಲಿಸಲ್ ತುರಂಗಗಳವೊಲ್ ಚಪಲಾತ್ಮರೆನಿಪ್ಪ ಭೂಪರಂ | ಪಿರಿದೆಮಗಾಸೆಯಾದೊಡೊಡಲಂ ಜರೆ ಬೇಗಮೆ ಜೀರ್ಣವಾಗಿಕುಂ || ಬರೆಸೆಳೆಗುಂ ವಲಂ ಪ್ರಿಯಮೆನಿಪ್ಪಸುವಂ ಬಲಶಾಲಿ ಮೃತ್ಯು ತಾಂ | ಪರಿಕಿಸೆ ಬಲ್ಲವಂಗೆ ತಪದಿಂ ಪೆರತಾವುದೊ ಮುಕ್ತಿ ಸಾಧನಂ ||೭೭||

ವೃ|| ಪೋದುದು ಮಾನಮುಂ ಸಿರಿಯುಮಿಂಗಿದುದರ್ಥಿಜನರ್ ನಿರರ್ಥರಾ | ಗೈದಿದರಿಷ್ಟರುಂ ಕುನುಗಿದರ್ ಸರಿದರ್ ನಿಜಸೇವಕರ್ಕಳುಂ || ತೀದುದು ಜೌವನಂ ಬುಧರೆ ಸಂಸೃತಿಯುಂ ತೊರೆದಿನ್ನು ಜಾಹ್ನವೀ | ಮೇದುರಪೂತಶೀತನಗಕುಂಜದೆ ನೀಮೆಸಗಿಂ ನಿವಾಸಮಂ ||೭೮||

ವೃ|| ಉದಿಪನ್ನಂ ಸದಸದ್ವಿಚಾರಮದು ಚಿತ್ತಕ್ಕುತ್ಪಲಾಹಾ
ದಿಕೌ | ಮುದಿಯುಂ ಬಾಲತೃಣೋಪಶೋಭಿವನಮುಂ ಸತ್ಸಂಗ
ಮಾನಂದಸಂ || ಪದಮುಂ ಶ್ರೋತ್ರಸುಖಾವಹಂ ಕೃತಿಕಥಾಸಂದೋ
ಹಮುಂ ರೋಷಣಾ | ಸ್ಪದಕಾಂತಾಶ್ರುವಿಮಿಶ್ರವಕ್ತ್ರಶಶಿಯುಂ ರಮ್ಯಂ
ಗಳಕ್ಕುಂ ವಲಂ ||೭೯||

ವೃ|| ನವಹರ್ಮ್ಯಾಂತರವಾಸಮೋನಸುಖಮೋ ಸಂಗೀತಮುಶ್ರಾ
ವ್ಯಮೋ | ತವಕಂಬೆತ್ತೊಡಗೂಡಿದಂಗನೆಯ ಭೋಗಂ ರಾಗಮಂ
ನೀಡದೇಂ || ಸುವಿಚಾರಂಗೆಯೆ ಬಭ್ರಮಚ್ಛಲಭಪಕ್ಷಾಲೋಲದೀಪಂ
ಬೊಲಿಂ | ತಿವು ಚಾಂಚಲ್ಯಮನಾಂಪುವೆಂದರಿದರಣ್ಯಂಬೊಕ್ಕರಾರ್ಯೋ
ತ್ತಮರ್ ||೮೦||

## ಶಿವಾರ್ಚನ ಪ್ರಕರಣಂ.

ಕಂ|| ನೀವವಧರಿಸಿಂ ಲೋಕದೊ |
ಳಾವವನಂ ಕಂಡುದಿಲ್ಲ ಕೇಳಿದುದಿಲ್ಲಂ ||
ಆವಂ ಭೋಗವಶಾರಾ |
ಗಾವಿಲಮಹ ಚಿತ್ತಕರಿಯ ಕಟ್ಟಿದ ದಿಟ್ಟಂ ||೮೧||

ವೃ|| ಚರಿಸುವೆವಿಚ್ಛೆವಂದೆಡೆಯೊಳುಂಬೆವು ದೀನತೆವೊರ್ದದೂ
ಟಮಂ | ಗುರುಪರಿಚರ್ಯೆಗೆಯ್ದಪೆವು ಕೇಳ್ವೆವು ಶಾಂತಿಫಲೈಕಶಾಸ್ತ್ರ
ಮಂ || ಪೊರಗೆಡೆಯಾಡದಿರ್ಪ ಮನದಿಂ ಸೊಗವಿರ್ದಪೆವಿಂತುಬಾಳ್ವ
ಸೈ | ಪೊರೆವೊಡದಾವ ಜನ್ಮದ ತಪಃಪರಿಪಾಕವೊ ಕಾಣೆವಾವದಂ||೮೨||

ವೃ|| ಮನದೊಳೆ ಜೀರ್ಣವಾದುದು ಮನೋರಥವೆಲ್ಲಮುಡಂಗಿ
ದತ್ತು ಜೌ | ವನಮುಕಟಾ ಗುಣಜ್ಞರಣಮಿಲ್ಲದನರ್ಥಕವಾಯ್ತು ಪ

ದ್ಗಣಂ || ಸನಿಹಕೆ ಕಾಲನೈದದೆರನೇಗತಿ ಹಾ ತಿಳಿದೆಂ ಕೃತಾಂತವು |
ರ್ದನನ ಪದಾಬ್ಜವೊಂದೆ ಗತಿಯಲ್ಲದೆ ಬೇರೆನಗಿಲ್ಲವೆಂಬುದಂ ||೮೩||

ಕಂ|| ಶಿವನೊಳಗಂ ಬಗೆವೊಡೆ ಕೇ |
ಶವನೊಳಗಂ ವಸ್ತುಭೇದಬುದ್ಧಿಯದೆಂತುಂ ||
ಸವನಿಸದಾರಯಲಾದೊಡ |
ಮೆವಗಕ್ಕುಂ ಭಕ್ತಿತರುಣಶಶಿಶೇಖರನೊಳ್ ||೮೪||

ವೃ|| ತೊಳಗುವ ಸಾಂದ್ರಚಂದ್ರರುಚಿಯಿಂದತಿನಿರ್ಮಳವಾದ ಜಾಹ್ನವೀ | ಪುಳಿನನೆ ಕುಳ್ಳಿರುತ್ತುಲಿಪಡಂಗಿದ ನಟ್ಟಿರುಳೊಳ್ ಭವಾರ್ತಿವಿ | ಹ್ವಳಮನನಾಗಿ ನಾಂ ಶಿವಶಿವಾಧವ ಎಂದವಿದಿಕ್ಕುತೆಂದಣಂ | ತಳೆವೆನೊ ಚಿತ್ತಲೀನಸುಖಬಾಷ್ಪಸಮಾಕುಲವಾದವಸ್ಥೆಯಂ ||೮೫||

ವೃ|| ಎರೆದವರ್ಗಿಲ್ಲವೆಂದೊರೆಯದೈಸಿರಿಯೆಲ್ಲಮನಿತ್ತುನಲ್ಮೆಯಿಂ| ಪರಿಣತಿಘೋರವೆಂದರಿದು ಸಂಸೃತಿಯಂ ಸಲೆವಾಣ್ದರಣ್ಯದೊಳ್ || ಹರಿಸದಿನೆಂದು ನೂಂಕುವೆನೊ ಶಾರದಚಂದ್ರಮನೋಜ್ಞರಾತ್ರಿಯಂ | ಹರಚರಣಾರವಿಂದಪರಿಚಿಂತನಕಂದಳಿತಾನುಮೋದದಿಂ ||೮೬||

ವೃ|| ಭೂನುತಕಾಶಿಯೊಳ್ ಸುರನದೀತಟದೊಳ್ ನೆರೆನಿಂದು ತಾಳ್ದು ಕೌ | ಪೀನವನಾಂತು ಶೀರ್ಷದೊಳಗಂಜಲಿಯಂ ಶಿವ ಶರ್ವ ಪಾರ್ವತೀ || ಜಾನಿ ಮಹೋಕ್ಷಲಕ್ಷನಿಟಿಲಾಕ್ಷ ಸುಮೋಕ್ಷದ ಶಂಭು ರಕ್ಷಿಸೆಂದಾನವಿದಿಕ್ಕುತಂ ಕಳೆವೆನೆಂದು ದಿನಂ ನಿಮಿಷಾರ್ಧಮೆಂಬಿನಂ ||

ವೃ|| ಸುರನದಿಯಲ್ಲಿ ಮಿಂದು ಫಲಪುಷ್ಪದೆ ಶಂಕರ ನಿನ್ನ ಪಾದಪಂ | ಕರುಹಮನರ್ಚಿಸುತ್ತಿರೆವೆನಾನಿದನೆಂದಿಗನುಗ್ರಹಿಪ್ಪೆಯೈ || ಅರಸರ ಸೇವಿಪೊಂದಳಲ ನೀಗಿ ಗುಹಾಂತರವಾಸಿಯಾಗಿ ಸ| ದ್ಗುರುವರ ನುಕ್ತಿಯಂ ಸ್ಮರಿಸುತಂ ಸತತಂ ಸುಖಮಿರ್ಪ ಭಾಗ್ಯಮಂ ||೮೮||

ಕಂ|| ಏಕಾಕಿಯಾಗಿ ನೀಗಿ ದು |
ರಾಕಾಂಕ್ಷೆಯ ಶಾಂತಿವೆರಸು ಭಿಕ್ಷೆಯ ಕರದಿಂ ||
ಸ್ವೀಕರಿಸಿ ದಿಗಂಬರನಾ |
ಗೀ ಕರ್ಮದ್ರುಮವನೆಂದುಕಡಿವೆನೋ ಮೃಡನೇ ||೮೯||

ವೃ|| ಕರಮನೆ ಪಾತ್ರೆಗೆಯ್ದು ಶುಚಿಭೈಕ್ಷದೆ ತೋಷಿಪ ಸಂದ ತಾಣದ | ಲ್ಲೊರಗುವ ಲೋಕವಂ ತೃಣಕೆ ಕಾಣ್ಬ ಶರೀರವ ಮಾಣ ದಿದ್ರೊಡಂ || ಪರಮಸುಖಾವಬೋಧದೆ ವಿದೇಹತೆಯೊಂದುವ ಯೋಗಿಗಳ್ಗೆ ಶಂ | ಕರಚರಣಪ್ರಸಾದಸುಲಭಂ ಪಥವೊಂದಳವಟ್ಟು ತೋರುಗುಂ ||೯೦||

ವೃ|| ಕೋವಣವಾಂತು ಜೀರ್ಣತರಕಂಥೆಯನಂಗದೆ ಪೊದ್ದು ಭೈಕ್ಷಮಂ | ಸೇವಿಸಿ ಚಿತ್ತನಿಶ್ಚಲತೆಯಿಂ ವಿಪಿನಾಂತರದೊಳ್ ಮಲಂ ಗುತಂ || ತೀವೆ ಕರಂ ನಿಜಾತ್ಮದ ಪರೋಕ್ಷತೆ ಶಾಶ್ವತಯೋಗರಾಜಲ | ಕ್ಷ್ಮೀವಿಭುವಾದ ಯೋಗಿ ಬಗೆಯಂ ಗಡ ಮೂಜಗದಾಧಿಪತ್ಯಮಂ ||

## ಅವಧೂತಚರಿತ್ರಪ್ರಕರಣಂ.

ಕಂ|| ಪರಿಕಿಪೊಡೆ ಬಟ್ಟೆಗೆರೆಯನಿ |
ತರವಿಂದಭವಾಂಡಮಿದು ಮನಸ್ವಿಯ ಬಗೆಯಂ ||
ಮರಲಿಸಲಾರ್ಪುದೆ ಮಾನ್ಗಳ್ |
ಪೊರಳಲ್ ಸಾಗರಕೆ ಸಮನಿಕುಮೆ ಸಂಕ್ಷೋಭಂ ||೯೧||

ವೃ|| ಸಿರಿ ನೀ ನೆಮ್ಮನದೇಕೆ ಕಾಂಕ್ಷಿಸುವೆ ನಿನ್ನಂ ಸೇವಿಪರ್ ನಾಡೆ ಭೋ | ಗರತರ್ ಸೇರವರಂ ನಿರಾಶರೆನಿಪೆಮ್ಮನ್ನರ್ಗೆ ನಿನ್ನಿಂ

ದಮೇಂ || ತರುಪರ್ಣಾಳಿನಿಬದ್ಧಪಾತ್ರದೆ ಪವಿತ್ರೀಭೂತಭಿಕ್ಷಾನ್ನಮಂ |
ಕರಮಾರೋಗಿಸಿ ಬಾಳ್ವದೊಂದಿರವನೇ ಕಾಂಕ್ಷಿಪ್ಪೆವಾವುರ್ವಿಯೊಳ್ ||

ವೃ|| ಧರಣಿಯೆ ನೀಳ್ದಪಾಸು ಭುಜಮೇ ತಲೆಗಿಂಬು ವಿತಾನಮಾಗಸಂ | ಸುರಭಿಳಮಾರುತಂ ವ್ಯಜನಮಿಂದುವೆ ದೀವಿಗೆಯಾಗೆ ಸಂತತಂ || ವಿರತಿವಧೂಟಿಗೂಡಿ ಸುಖಿಪಂ ಮಿಗೆ ಸಂತತ ಯೋಗನಿದ್ರೆಯೊಳ್ | ಗುರುತರ ಸಂಪದಂಬಡೆದ ಭೂಮಿಪನಂದದೆ ಯೋಗಿಪುಂಗವಂ ||೯೪||

ವೃ|| ಜಡಜನಸಂಗಮಂ ತೊರೆದು ಭೈಕ್ಷಮನುಂಡು ನಿರಾಶನಾಗಿ ಮೇಣ್ | ಕುಡುವುದು ಕೊಂಬುದೆಂಬುವನೆ ಮಾಣ್ದು ನಿರಂಕುಶಮಪ್ಪ ವೃತ್ತಿಯಿಂ || ನಡೆದೆಡೆವಟ್ಟೆಯೊಳ್ಬಿಸುಟ ಬಟ್ಟೆಯತೊಟ್ಟಭಿಮಾನಮೆಂಬುದಂ | ಜಡಿದು ಶಮೋಪಭೋಗಪರನಿರ್ದ್ದಪನೊರ್ವ್ವನುದಾರತಾಪಸಂ ||೯೫||

ವೃ|| ಇವನೇಂ ಚಂಡಾಲನೋ ಮೇಣ್ ದ್ವಿಜನೊ ಪರಕಿಸಲ್ ಶೂದ್ರನೋ ಮೇಣ್ ತಪಸ್ವಿ | ಪ್ರವರಂ ತಾನೋ ನಿಜಾತ್ಮಸ್ತಿಮಿತಮತಿಮಹಾಯೋಗಿಯೋ ಮೇಣೆನುತ್ತಂ || ತವೆ ಲೋಗರ್ ಮಾಳ್ಪನಿಂದಾಸ್ತುತಿಗಳೊಳಗಣಂ ಕೋಪಹರ್ಷಂಗಳಂ ಮಾ | ಣ್ದವಧೂತರ್ ಶಾಂತ್ಯುಪೇತರ್ ಚರಿಪರಮಮ ಸಂಸಾರಜೀಮೂತವಾತರ್ ||೯೬||

ವೃ|| ಹಿಂಸಾದೂರಮಯತ್ನಲಭ್ಯಮುಮೆನಿಪ್ಪಾ ವಾಯುವುಂ ಪುಲ್ಲುಮಂ | ತಾಂ ಸರ್ಪವ್ರಜಕಂತೆ ಗೋವ್ರಜಕಜಂ ಮಾಳ್ದಂತಿರಾಹಾರಮಂ || ಸಂಸಾರಾಬ್ಧಿಯ ದಾಂಟುವರ್ಗ್ಗಮಿರದೀ ಸದ್ವೃತ್ತಿಯಂ ಗೈದನಾ | ದಂ ಸಂಪಾದಿಸಿದರ್ಗ್ಗದಂ ಗುಣಮನಿತ್ತುಂ ಶಾಂತಿಯಂ ಪೊರ್ದ್ದುಗುಂ ||೯೭||

ವೃ|| ಸುರಸಿಂಧುಕ್ಷಾಳಿತಾಂಚತ್ತುಹಿನಗಿರಿಶಿಲಾಪೀಠದೊಳ್ಕುಳ್ಳಿರುತ್ತಂ | ಪರಮೇಶಧ್ಯಾನವಿದ್ಯಾಭ್ಯಸನವಿಧಿಯೊಳಾಂ ಯೋಗನಿದ್ರಾಸುಖಂದಾ || ಳ್ದಿರೆ ಸಾರಂಗೋತ್ಕರಂ ಶಂಕಿಸದಿನಿತುಮನೆನ್ನಂಗದೊಳ್ ಸಾರ್ಚ್ಚಿಮೆಯ್ಯಂ | ತುರಿಸುತ್ತಂ ಸಂತವಿಪ್ಪರ್ಮ ಸುದಿನಮೆನಗದೆಂದಪ್ಪುದೋ ಪುಕ್ಕಸೈಪಿಂ ||೯೮||

ಭುಜಂಗಪ್ರಯಾತ ವೃತ್ತ || ಕರಂಪಾತ್ರೆ ಭೈಕ್ಷಂ ಪವಿತ್ರಾನ್ನಮಾಶೋ | ತ್ಕರಂ ವಸ್ತ್ರಮುರ್ವೀತಲಂ ತಲ್ಪಮಾಗಲ್ || ವಿರಕ್ತರ್ ಜನಾಸಂಗದೂರರ್ ಸುತೃಪ್ತರ್ | ಕರಂ ಕರ್ಮಮಂ ಕಿಳ್ತು ತಾಂ ಸಂತವಿಪ್ಪರ್ ||೯೯||

ಕಂ|| ಪವನಂ ತಾಂ ಸೋಂಕಿಯುಮೆ |
ಲ್ಲವನಮುಲನೆನಿಪ್ಪತೆರದಿನಾರಬ್ಧಸುಭೋ ||
ಗವನನುಭವಿಸಿಯುಮಂಟದೆ |
ತವೆ ಚರಿಪಂ ಚಿತ್ರತೃಪ್ತಜೀವನ್ಮುಕ್ತಂ ||೧೦೦||

ವೃ|| ಮಾತೆ ಧರಿತ್ರಿ ತಾತ ಪವನಾ ಸಖ ವಹ್ನಿಯೆ ಬಂಧುತೋಯಮೇ | ಭ್ರಾತೃವೆ ಬಾನೆ ನಾಡೆ ರಚಿಪೇಂ ನಿಮಗಾಂ ಚರಮಪ್ರಣಾಮಮಂ || ಪೂತನಿಜಾನುಷಂಗಭವಪುಣ್ಯದೆ ಪುಟ್ಟಿದ ಚಿದ್ವಿಶೇಷದಿಂ || ಧೂತಸಮಸ್ತಮೋಹಮಹಿಮಂ ಪರಬೊಮ್ಮದೆ ಲೀನನಾದಪೆಂ |೧೦೧||

ಕಂ|| ಮುನ್ನಿದು ಸಂಸ್ಕೃತದಿಂ ಬುಧ |
ರನ್ನಲವಡಿಸಿತ್ತು ಮತ್ತೆ ಸೊಗವಡಿಸಿತ್ತೊ ||
ಳ್ಗನ್ನಡದಿಂದಮುಮೆನೆ ಪೇ |
ಳ್ದೆನ್ನೀತಿಪ್ರಮುಖಮೆನಿಪ ಶತಕತ್ರಯಮಂ ||೧೦೨||

ಕಂ|| ಸಕ್ಕದವೇಂ ಕನ್ನಡಮೇ |
ನೊಕ್ಕಣಿಸಿದ ವಿಷಯವೊಂದೆಗಡ ತಾವುದರಿಂ ||
ತಕ್ಕರ್ ಕೇಳ್ದಾನಂದಿಪ |
ರಕ್ಕೆ ಗುಣಪ್ರವಣಮತಿಯಿನೀನುತಕೃತಿಯಂ ||

ಕಂ|| ನೀತಿಗಿದು ಬೀಡು ಶೃಂಗಾ |
ರಾತಿಶಯಕ್ಕಿದುವೆ ನಾಡು ವೈರಾಗ್ಯಮಹಾ ||
ಭೂತಿಗಿದಾಡುಂಬೊಲಮೆನೆ |
ಭೂತಲದೊಳ್ ಖ್ಯಾತಮಕ್ಕೆ ಶತಕತ್ರಯಮುಂ ||೧೦೪||

**ವೈರಾಗ್ಯಶತಕಂ ಸಂಪೂರ್ಣಂ.**



## ನಮ್ಮಲ್ಲಿ ದೊರೆಯುವ ಪುಸ್ತಕಗಳು.

| | |
|---|---|
| ಕರ್ಣಾಟಕಶಾಕುಂತಳ ನಾಟಕ | 1—4—0 |
| ಕರ್ಣಾಟಕ ಭರ್ತೃಹರಿಸುಭಾಷಿತ ಶತಕತ್ರಯ | 0—6—0 |
| ದಮಯಂತೀ ಸ್ವಯಂವರ | 1—0—0 |

ವಿಳಾಸ—

ಆಸ್ಥಾನವಿದ್ವಾನ್ ಬಿ. ಮಹಾದೇವಶಾಸ್ತ್ರಿ,

ಕೆರ್ಲಾಪುರ

ತಾಲ್ಲೋಕು ಅರಕಲಗೂಡು

ಡಿಸ್ಟ್ರಿಕ್ಟ ಹಾಸನ.